

ಶಿವರಾತ್ರಿಯ ಜಾತ್ರಾ ಕಾಲದ ವ್ಯವಸಾಯ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ಮುಕ್ತಾಯ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ರಾಜ್ಯದ ಉನ್ನತ ಪೋಲೀಸ್ ಅಧಿಕಾರಿಗಳಾದ ಶ್ರೀ ಹೆಚ್. ವೀರಭದ್ರಯ್ಯನವರು ಶ್ರೀ ಶ್ರೀಗಳವರೊಂದಿಗೆ ಪ್ರಶಸ್ತಿಪತ್ರಗಳನ್ನು ವೀಕ್ಷಿಸುತ್ತಿರುವುದು. ತುಮಕೂರು ಜಿಲ್ಲಾಧಿಕಾರಿ ಶ್ರೀ ಮುನಿಸ್ವಾಮಿಯವರು ಸಭೆಯನ್ನುದ್ದೇಶಿಸಿ ಮಾತನಾಡುತ್ತಿದ್ದಾರೆ.

## ಶ್ರೀ ಮಠದ ಬಗ್ಗೆ ರಾಜ್ಯಪಾಲರ ಮೆಚ್ಚುಗೆ

Sree Siddaganga Mutt under the able and dynamic leadership of the Swamiji has been doing such good work for the people all round for such a long time that my wife and I were very keen to pay a visit to this Mutt. Our wish has been fulfilled to-day and we are very happy to have had Swamiji's Darshan and seen the various arrangements. The kitchen which has continuously been running since 1917 now feeds more than 4000 people every day including about 3500 students, who receive education here with Sanskrit and spiritual teaching as compulsory parts of their learning. What a wonderful system this is and what fine future citizens could come out of such system. We have high praise for this.

We wish all success and prosperity to those who are benefitting from all these activities unit the benign blessings of Lord Basaveswara.

GOVIND NARAIYN.
Gevernor of Karnataka. 21st Feb. 1980



# ಶ್ರೀವಾಣಿ

ಅಪರಿಪೂರ್ಣತೆಯಿಂದ ಪರಿಪೂರ್ಣತೆಯನ್ನು ಹೊಂದುವುದೇ ಮಾನವನ ಧ್ಯೇಯವು. ಮನುಷ್ಯನ ನಿಜಸ್ವರೂಪದ ಅರಿವು ಆದರೆ ಮಾತ್ರ ಈ ಧ್ಯೇಯ ಸಾಧನೆಯ ಸಲುವಾಗಿ ಶ್ರಮಿಸಿ ಕೃತಕೃತ್ಯನಾಗಬಲ್ಲನು. ಮಾನವನೆಂದರೆ ಕೇವಲ ದೇಹವಲ್ಲ, ಪ್ರಾಣವಲ್ಲ, ಮೇಲಾಗಿ ಆತ್ಮನೂ ಹೌದು. ದೇಹ ಪ್ರಾಣ ಆತ್ಮಗಳ ಸಂಗಮವೆ ಪರಿಪೂರ್ಣ ವ್ಯಕ್ತಿತ್ವವು. ಸಾಮುದಾಯಿಕ ಬೆಳವಣಿಗೆಯೇ ನಿಜವಾದ ಪ್ರಗತಿ ಎನ್ನುವುದು. ಅಂತೆಯೇ ಈ ಮೂರನ್ನೂ ಚೆನ್ನಾಗಿ ಲಕ್ಷಿಸಿ ಅರ್ಥ ಮಾಡಿಕೊಂಡು ಒಂದೊಂದನ್ನೂ ಪ್ರಗತಿ ಪಥದಲ್ಲಿ ಒಯ್ಯುವುದು ಅವಶ್ಯಕ. ಇಂದು ಮಾನವನದೃಷ್ಟಿ ಕೇವಲ ಹೃದ್ಗೋಚರವಾದ ವಸ್ತುಗಳ ಅವಲೋಕನದಲ್ಲಿ ಮಾತ್ರ ಮಿಸಲಾಗಿರುತ್ತೆ. ಅಗೋಚರವಾದ ವಸ್ತುಗಳು ತತ್ವಗಳ ಬಗ್ಗೆ ಉದಾಸೀನ ಮಾಡುತ್ತಾನೆ. ಆದುದರಿಂದ ಪ್ರತ್ಯಕ್ಷಯೋಗ್ಯವಾದ ದೇಹದ ವಿಚಾರಕ್ಕೆ ಹೆಚ್ಚು ಸಾಧನೆಕೊಟ್ಟು ದೇಹ ಸುಖಕ್ಕೆ ಸಾಧನೀಭೂತವಾದ ವಸ್ತುಗಳಿಗೆ, ಯೋಜನೆಗಳಿಗೆ ವಿಶೇಷ ಮಹತ್ವಕೊಡುತ್ತಿದ್ದಾನೆ. ಪ್ರತ್ಯಕ್ಷ ಗೋಚರವಲ್ಲದಿದ್ದರೂ ಅನುಭವ ವೇದ್ಯವಾದ ಮನಸ್ಸಿನ ಅಸ್ತಿತ್ವವನ್ನು ಒಪ್ಪಿರುತ್ತಾನೆ. ಸಾಮಾನ್ಯವಾಗಿ ಮನಸ್ಸೆಂಬ ಶಬ್ದದಿಂದ ವ್ಯವಹೃತವಾದ ಅಂತಃಕರಣ ಪ್ರವೃತ್ತಿಯು ವಿಭಿನ್ನ ವ್ಯಾಪಾರವುಳ್ಳ ಮನ, ಬುದ್ಧಿ, ಚಿತ್ತ ಅಹಂಕಾರವೆನ್ನುವ ನಾಲ್ಕು ಭಾಗಗಳನ್ನೊಳಗೊಂಡು ಅಂತಃಕರಣ ಚತುಷ್ಟಯವೆಂದು ಕರೆಯಲ್ಪಡುತ್ತದೆ. ಈ ಮನಸ್ಸು ಅದ್ಭುತ ಶಕ್ತಿಯುಳ್ಳದ್ದಾಗಿ ಮಾನವನನ್ನು ದೇಹೇಂದ್ರಿಯಗಳ ಮೂಲಕ ಮಾಡತಕ್ಕ ಪ್ರತಿಯೊಂದು ಕ್ರಿಯೆಗೂ ವಾಣಿಗೂ ಸಂಚಾಲಕ ಚೇತನವಾಗಿದೆ. ಇಂಥಮನಸ್ಸನ್ನು ಅಂಕೆಯಲ್ಲಿಟ್ಟುಕೊಂಡು ಮಾನವನು ಇಂದು ಕಲ್ಯಾಣದತ್ತ ಹೆಜ್ಜೆಯಿಡುವುದು ಅವಶ್ಯಕವಾಗಿದೆ.

—

# 'ಸಿದ್ಧಗಂಗಾ'

**ಮಾರ್ಚಿ ೧೯೮೦**

**ಸಂಪುಟ-೧೩ ಸಂಚಿಕೆ-೧ - ೨**

ಪ್ರಕಾಶಕರು

ಹೆಚ್. ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿಸಂಘದ ಪರವಾಗಿ

ಸಂಪಾದಕ ಮಂಡಲಿ

ಪಂ|| ಚನ್ನಪ್ಪ ಎರೇಸೀಮೆ

ಪಿ. ಎನ್. ಚಂದ್ರಶೇಖರಯ್ಯ

ವಿರೂಪಾಕ್ಷಯ್ಯ

ಬಸವರಾಜು

ಜಾಹಿರಾತು ವ್ಯವಸ್ಥಾಪಕರು

ಎಂ. ರೇಣುಕಾರಾಧ್ಯ

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

ಆಜೀವ ಸದಸ್ಯತ್ವ: **151-00** ರೂ

ವಾರ್ಷಿಕ ಚಂದಾ: **10-00** ರೂ


## ಈ ಸಂಚಿಕೆಯಲ್ಲಿ



### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು, ಸಣ್ಣಕಥೆ, ಕವನ, ನಗೇಹನಿ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು!ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು, ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

"ಸಂಪಾದಕರು"

"ಸಿದ್ಧಗಂಗಾ" [ಕನ್ನಡ ಮಾಸ ಪತ್ರಿಕೆ]

ಶ್ರೀ ಸಿದ್ಧಗಂಗಾ ಕ್ಷೇತ್ರ-572104 ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ವಿನಂತಿ

1980ನೆಯ ಹೊಸ ವರ್ಷದ ನಿಮ್ಮ ಚಂದಾ ನಂಬರ್ ಗುರುತಿಸಿಕೊಳ್ಳಿ. ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವಹರಿಸುವಾಗ ನಿಮ್ಮ ವಿಳಾಸದ ಹಿಂಬದಿ ಇರುವ ಚಂದಾ ನಂಬರ್ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ವ್ಯವಹರಿಸಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ಮುಂದಿನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ಪ್ರಾರ್ಥನೆ.

ಪ್ರಕಾಶಕರು

'ಸಿದ್ಧಗಂಗಾ' ಮಾಸ ಪತ್ರಿಕೆ, ಸಿದ್ಧಗಂಗಾ ಮಠ-572104 **ತುಮಕೂರು ಜಿಲ್ಲೆ.**

# ಸಂಪಾದಕೀಯ

ಕರ್ನಾಟಕದ ರಾಜ್ಯದ 1980–81 ರ ಆಯ ವ್ಯಯವನ್ನು ಹಣಕಾಸಿನ ಮಂತ್ರಿ ಮಾನ್ಯ ವೀರಪ್ಪಮೊಯ್ಲಿಯವರು ವಿಧಾನಮಂಡಲದಲ್ಲಿ ಮಂಡಿಸಿದ್ದಾರೆ. 82 ಕೋಟಿ 38 ಲಕ್ಷ ರೂಪಾಯಿಗಳ ಖೋತಾವನ್ನು ಭರ್ತಿ ಮಾಡಲೋಸುಗ 13 ಕೋಟಿ 16 ಲಕ್ಷ ರೂಪಾಯಿಗಳ ತೆರಿಗೆ ವಸೂಲಿ ಮಾಡುವ ಉದ್ದೇಶಗಳನ್ನು ಸೂಚಿಸಿದ್ದಾರೆ. ಅಭಿವೃದ್ಧಿಯ ಸಾಧನೆಯು ಶೇಕಡ ಏಳೂವರೆಯಷ್ಟಾಗಬೇಕೆಂಬ ದೃಷ್ಟಿಯಿಂದ ಹಲವು ಮೂಲ ಉದ್ದೇಶಗಳನ್ನು ವಿವರಿಸಿದ್ದಾರೆ.– ಗ್ರಾಮಾಂತರ ಅಭಿವೃದ್ಧಿ ಕೆಲಸದಲ್ಲಿ ಸಮತೋಲನವನ್ನು ಸಾಧಿಸುವುದು, ಗರಿಷ್ಠ ಉತ್ಪಾದಕ ಉದ್ಯೋಗಾವಕಾಶವನ್ನು ಕಲ್ಪಿಸುವುದು. ವಿದ್ಯುಚ್ಛಕ್ತಿಯ ವ್ಯವಸ್ಥೆಯನ್ನು ಭದ್ರಗೊಳಿಸುವುದು, ಗ್ರಾಮೀಣ ಪ್ರದೇಶದಲ್ಲಿ ರಸ್ತೆ ಸಂಪರ್ಕ ಕಲ್ಪಿಸುವುದು, ದಲಿತೋದ್ಧಾರ ಮಾಡುವುದು, ರೈತರ ವ್ಯವಸಾಯೋತ್ಪನ್ನಗಳಿಗೆ ಸೂಕ್ತ ಮಾರುಕಟ್ಟೆ ವ್ಯವಸ್ಥೆಯನ್ನು ಮಾಡುವುದು. ಭೂಸುಧಾರಣಾ ಕ್ರಮಗಳಿಗೆ ನಿಜವಾದ ಅರ್ಥವನ್ನು ಕಲ್ಪಸುವುದು. ಹರಿಜನ ಗಿರಿಜನ ಮತ್ತಿತರ ಹಿಂದುಳಿದ ವರ್ಗದವರಿಗೆ ಇನ್ನೂ ಅಧಿಕ ಕಲ್ಯಾಣ ಕಾರ್ಯಗಳನ್ನು ಯೋಜಿಸುವುದು.

ನೀರಾವರಿಯ ಪ್ರದೇಶವನ್ನು 1.05 ಲಕ್ಷ ಹೆಕ್ಟೇರುಗಳಷ್ಟು ಅಧಿಕಗೊಳಿಸುವುದು. ಗ್ರಾಮೀಣ ಬಡ ಜನತೆಗಾಗಿ ಒಂದು ಲಕ್ಷ ಮನೆಗಳನ್ನು- ಒದಗಿಸುವುದು. ಕೃಷಿ ಅಭಿವೃದ್ಧಿಗೆ ಅತ್ಯಾವಶ್ಯಕ ಸಾಧನ ಸಲಕರಣೆಗಳನ್ನು ಉಪಯುಕ್ತ ರೀತಿಯಲ್ಲಿ ಒದಗಿಸುವುದು ಮುಂತಾದ ಉದ್ದೇಶಗಳನ್ನು ಪ್ರಜಾಕೋಟಿಯ ಮುಂದಿಟ್ಟಿದ್ದಾರೆ. ಈಡೇರಿಕೆಯ ಭರವಸೆಯನ್ನು ಕೊಟ್ಟಿದ್ದಾರೆ. ಆಯವ್ಯಯವು ಆರಂಭದಲ್ಲಿ ಆಶಾದಾಯಕವಾದರೂ ಪರಿಣಾಮದ ಪರಿಪೂರ್ಣತೆಯನ್ನು ಕಾದು ನೋಡಬೇಕಾಗಿದೆ.

ಸಾಮಾನ್ಯಜನರು ಬಳಸಬಹುದಾದಂತಹ ಸೈಕಲ್ಲಿನ ಬಿಡಿ ಭಾಗಗಳ ಮೇಲಿನ ತೆರಿಗೆಯನ್ನು ಕಡಿಮೆ ಮಾಡಿರುವುದು. ನೀರಾವರಿ ಸೌಲಭ್ಯವನ್ನು ಒದಗಿಸುವಲ್ಲಿ ಉಂಟಾಗಿರುವ ತಾರತಮ್ಯದ ನಿವಾರಣೆ ಮಾಡುವುದು. ಕುಡಿಯುವ ನೀರಿಗಾಗಿ ಹರಿಜನ ಕೇರಿಗಳ ನೀರಾವರಿ ಬಾವಿಗಳಿಗಾಗಿ 9 ಕೋಟಿ 8 ಲಕ್ಷ ರೂಪಾಯಿಗಳನ್ನೊದಗಿಸುವುದು ಗ್ರಾಮಾಂತರ ಶಾಲಾಕಟ್ಟಡಗಳಕಡೆ ಗಮನಹರಿಸುವುದು ಮತ್ತು ಇದರ ಜೊತೆಗೆ ಉಪಾಧ್ಯಾಯರ ಮನೆಗಳನ್ನು ನಿರ್ಮಿಸುವುದು. ರಾಜ್ಯ ಸರಕಾರೀ ನೌಕರರಿಗೆ ತುಟ್ಟಿಭತ್ಯವನ್ನು ಹೆಚ್ಚಿಸುವುದು. ಇತ್ಯಾದಿಯಾಗಿ ಕೆಲವು ಅಗತ್ಯ ಕ್ರಮಗಳನ್ನು ಕೈ ಕೊಂಡಿರುವ ಮಾನ್ಯಸಚಿವರ ಆಯ ವ್ಯಯಮಂಡನೆ ಅಭಿನಂದನೀಯವಾದುದು.

ಪೆಟ್ರೋಲ್, ಮದ್ಯ, ಟೈರು, ಟ್ಯೂಬ್; ರೇಷ್ಮೆ, ತಾರಾ ಹೋಟೆಲ್ ತಿನಿಸುಗಳ ಮೇಲೆ ಶೇಕಡ 10 ರ ಕರಭಾರ ವಿಧಿಸಲಾಗಿದೆ. ಈ ಕರಭಾರದಿಂದಾಗಿ ಶ್ರೀಮಂತರು ಮಿತಿಮೀರಿ ದುಂದು ವೆಚ್ಚ ಮಾಡುವುದನ್ನು ನಿಯಂತ್ರಿ

ಸುವುದೆಂದು ಸಚಿವರ ಸಮರ್ಥನೆ. ಆದರೆ ಅಡಿಗೆ ಎಣ್ಣೆಗಳು ಹಾಗು ಬಿಸ್ಕತ್-ಕೇಕ್-ಮಿಠಾಯಿ ಮತ್ತೂ ಮನರಂಜನೆಯ ಮೇಲಿನ ತೆರಿಗೆ ಸಾಮಾನ್ಯ ಹಾಗು ಮಧ್ಯಮವರ್ಗದ ಜನಜೀವನಕ್ಕೆ ಹುಣ್ಣಿನ ಮೇಲೆ ಬರೆ ಎಳೆದಂತಾಯಿತು, ಕಾರಣ ಈಗ ಇವುಗಳಿಗಿದ್ದ ಬೆಲೆಯೇ ದುಬಾರಿಯಾಗಿರುವಾಗ ಮತ್ತು ಅವುಗಳ ಮೇಲೆ ತೆರಿಗೆ ವಿಧಿಸುವುದು ಹೊರ ಲಾರದ ಹೊರೆ.

ಒಟ್ಟಿನಲ್ಲಿ ಅಭಿವೃದ್ದಿಶೀಲ ಯೋಜನೆಗಳು ಸಾರ್ಥಕ್ಯವನ್ನು ಪಡೆಯ ಬೇಕಾದರೆ ದಿನ ನಿತ್ಯದ ಅಗತ್ಯವಸ್ತುಗಳ ಬೆಲೆಗಳ ಅತಿಪ್ರಸರಣವನ್ನು ತಡೆಗಟ್ಟದ ಹೊರತು ಜನತೆ ನೆಮ್ಮದಿಯನ್ನು ಹೊಂದಲಾರದು. ಮುಂಬರಲಿರುವ ಹೊಸ ಸಂವತ್ಸರವು ತನ್ನ ರೌದ್ರತೆಯನ್ನು ಶಾಂತಿ ಸಂವೃದ್ಧಿಯಲ್ಲಿ ಪರ್ಯವಸಾನ ಗೊಳಿಸಲೆಂದು ಭಗವಂತನನ್ನು ಪ್ರಾರ್ಥಿ ಸೋಣ.

* * *

ಆರಂಭದಲ್ಲಿಯೇ ರೌದ್ರಿ ನಾಮ ಸಂವತ್ಸರ ತನ್ನ ರೌದ್ರತೆಯನ್ನು ಕನ್ನಡ ಸಾರಸ್ವತ ಲೋಕದ ಮೇಲೆ ಪ್ರದರ್ಶಿಸಿದೆ. ಭಟ್ಟರಿಬ್ಬರು (ಸ್ನಾತಕಲಭಾಗದ ಆಚಾರ್ಯರಿಗೆ ಬಟ್ಟರೆಂದು ಹೆಸರು) ಎರಡು ದಿನಗಳಂತರದಲ್ಲಿಯೇ ಇಹ ಲೋಕದ ಯಾತ್ರೆಯನ್ನು ಮುಗಿಸಿದರು. ಅವರೇ ಪ್ರೊ. ಎಂ. ಮರಿಯಪ್ಪ ಭಟ್ಟರು ಮತ್ತು ಪ್ರೊಫೆಸರ್ ತೆಕ್ಕುಂಜೆ ಗೋಪಾಲಕೃಷ್ಣ ಭಟ್ಟರು.

ಪ್ರೊಫೆಸರ್ ಮುಂಗಿಲಿ ಮನೆ ಮರಿಯಪ್ಪಭಟ್ಟರು (76) 22-3-80 ರಂದು ರಾತ್ರಿ ಮದ್ರಾಸಿನಲ್ಲಿ ನಿಧನ ರಾದರು. ದಿವಗಂತರು ಒಂದು ವಿದ್ವತ್ ಸಂಸ್ಥೆಯಂತಿದ್ದರು. ಮರಿಯಪ್ಪಭಟ್ಟರೆಂದರೆ ಮದ್ರಾಸ್ ವಿಶ್ವವಿದ್ಯಾನಿಲಯದ ಕನ್ನಡದ ವಿಭಾಗ ಎಂಬತಿದ್ದರು. ರಾಜ್ಯಗಳ ಪುನಸ್ಸಂಘಟನೆಯ ಬಳಿಕ ದಕ್ಷಿಣ ಕನ್ನಡ ಜಿಲ್ಲೆಯ ಕಾಲೇಜುಗಳು ಮದ್ರಾಸ್ ವಿಶ್ವವಿದ್ಯಾನಿಲಯದಿಂದ ಬೇರ್ಪಟ್ಟನಂತರ, ಅಲ್ಲಿ ಕೈಬೆರಳೆಣಿಕೆಯಷ್ಟು ಕನ್ನಡ ವಿದ್ಯಾರ್ಥಿಗಳಿದ್ದರೂ ಕನ್ನಡ ಅಧ್ಯಯನದ ಸ್ಥಾನ ಉಳಿದದ್ದು ಮರಿಯಪ್ಪಭಟ್ಟರಿಂದ, 1984ರಲ್ಲಿ ಪ್ರಕಟವಾಗಿದ್ದ ಕಿಟ್ಟೆಲ್-ಕನ್ನಡ-ಇಂಗ್ಲಿಷ್ ನಿಘಂ ಟನ್ನು ಶ್ರೀ ಎಂ. ಮರಿಯಪ್ಪಭಟ್ಟರು ಪರಿಷ್ಕರಣ-ವಿಸ್ತರಣದ ಪೂರ್ಣಹೊಣೆಹೊತ್ತು 1968ರಲ್ಲಿ ನಾಲ್ಕು ಸಂಪುಟಗಳಲ್ಲಿ ಪುನರ್ ಪ್ರಕಟಿಸಿದರು. ಕ್ರಿಶ್ಚಿಯನ್ ಹೈಸ್ಕೂಲಿನ ಅಧ್ಯಾಪಕರಾಗಿ ವೃತ್ತಿಯನ್ನು ಪ್ರಾರಂಭಿಸಿದ ಅವರು 1940ರಿಂದ 1947ರವರೆಗೆ ಮದ್ರಾಸ್ ವಿ. ವಿ. ಯಲ್ಲಿ ಅಧ್ಯಾಪಕರಾಗಿ ಪ್ರಾಧ್ಯಾಪಕರಾಗಿ ನಿವೃತ್ತರಾದರು. ಕನ್ನಡ ವಿದ್ಯಾರ್ಥಿಗಳಿಗೆ ಆಸರೆ, ಮಾರ್ಗದರ್ಶನ, ಉತ್ತೇಜನ ನಿಡುತ್ತಿದ್ದ ಅವರು ಮದ್ರಾಸಿನಲ್ಲೊಂದು ಕನ್ನಡ ಸಂಸ್ಥೆಯಾಗಿ ಬದುಕಿದರು. ಅನೇಕ ಹಳಗನ್ನಡ ಕೃತಿಗಳ ಸಂಪಾದನೆ ತುಳು-ಇಂಗ್ಲಿಷ್ ನಿಂಘಟು ರಚನೆ, ಭಾಷಾ ಸಂಶೋಧನೆ, ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು ಸಮಿತಿ ಅಧ್ಯಕ್ಷತೆ-ಕಾರ್ಯಗಳಿಂದ ಶ್ರೀ ಮರಿಯಪ್ಪಭಟ್ಟರು ವಿದ್ವತ್ ಪ್ರಂಪಚದಲ್ಲಿ ಹೆಸರಾದವರು. ಈಗ ಕನ್ನಡಕ್ಕೆ ಅಂಥ ಪಂಡಿತನಾದ ಪುತ್ರನ್ನೊಬ್ಬನ ನಷ್ಟ !

ಕನ್ನಡದ ಇನ್ನೊಬ್ಬ ಖ್ಯಾತ ಸಾಹಿತಿ (61) ಶ್ರೀ ತೆಕ್ಕುಂಜೆ ಗೋಪಾಲ ಕೃಷ್ಣಭಟ್ಟರು 25-3-80ರಂದು ಮಧ್ಯಾಹ್ನ ಮಂಗಳೂರಿನ ಕಂಕನಾಡಿ ಆಸ್ಪತ್ರೆಯಲ್ಲಿ ಉಸಿರೆಳೆದರು. ಮಂಗಳೂರಿನ ಸೇಂಟ್ ಅಲೋಷಿಯಸ್ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ನಿವೃತ್ತರಾಗಿದ್ದ ಪ್ರೊ. ತೇಕ್ಕುಂಜೆ ಅವರು ಕೊಣಾಜೆಯ ಕನ್ನಡ ವಿಭಾಗದಲ್ಲಿ ಸಂಶೋ ಧಕ ಪ್ರಾಧ್ಯಾಪಕರಾಗಿ ಕೆಲಸ ಮಾಡುತ್ತಿದ್ಧರು. ಶ್ರೀ ತೆಕ್ಕೊಂಜೆಯವರು ಕನ್ನಡದ ಉದ್ದಾಮ ಪಂಡಿತರಲೊಬ್ಬರಾಗಿ ದ್ದರು. ನಮ್ರನಡೆನುಡಿ. ದೃಢ ಪಾಂಡಿತ್ಯದ ಖಚಿತ ಅಭಿಪ್ರಾಯಗಳ ನಿರ್ದಾಕ್ಷಿಣ್ಯ ಪ್ರಕಟಣೆ ಇವುಗಳಿಂದ ಗೋಪಾಲ ಕೃಷ್ಣಭಟ್ಟರದು ಸುಶೋಭಿತ ವ್ಯಕ್ತಿತ್ವ. ಅಂಥ ಅವರು ನಮ್ಮಿಂದ ಬಲುದೂರ ಇಂದು. ಅವರೀರ್ವರಿಗೂ "ಸಿದ್ಧಗಂಗಾ" ತನ್ನ ಸಂತಾಪ ವ್ಯಕ್ತಪಡಿಸುತ್ತದೆ.

# ನವನೀತ

1. ಪ್ರಾಸಾದಿಕತ್ವ ಮಾರೋಗ್ಯಂ ಪ್ರಾಮೋದ್ಯಂ ಚಿರ ಜೀವಿತಂ ।
ಚಕ್ರವರ್ತಿ ಸುಖಂ ಸ್ಫೀತಂ ಶಾಂತಃ ಪ್ರಾಪ್ನೋತಿ ಸಂಸರನ್ ॥
—ಬೋಧಿಚರ್ಯಾವತಾರ.

ಸಂಸಾರದಲ್ಲಿದ್ದರೂ ಸಹ ಶಾಂತ ಸ್ವಭಾವದವನು, ಮನ ತೃಪ್ತಿಯನ್ನೂ, ಆರೋಗ್ಯವನ್ನು, ಆನಂದವನ್ನೂ, ದೀರ್ಘಾಯುಷ್ಯವನ್ನೂ, ರಾಜ ಸುಖ ವನ್ನೂ ಹೊಂದುತ್ತಾನೆ.

* * * *

2. ಧರ್ಮ ಏವ ಹತೋ ಹಂತಿ ಧರ್ಮೋ ರಕ್ಷತಿ ರಕ್ಷಿತಃ ।
ತಸ್ಮಾದ್ಧರ್ಮೋ ನ ಹಂತವ್ಯಃ ಮನೋ ಧರ್ಮೋ ಹತೋವಧೀತ್ ॥
—ಮನುಸ್ಮೃತಿ

ಧರ್ಮವನ್ನು ಮೀರಿನಡೆದರೆ ನಮಗೆ ಅದರಿಂದ ಹಾನಿಯುಂಟಾಗುತ್ತದೆ. ಧರ್ಮವನ್ನು ಆಚರಿಸಿದರೆ ನಮಗೆ ರಕ್ಷಣೆಯುಂಟಾಗುತ್ತದೆ. ಅದ್ದರಿಂದ ಧರ್ಮವನ್ನು ಮೀರಬಾರದು. ಧರ್ಮವನ್ನು ಮೀರಿ ಹಾಳಾಗುವುದು ಯುಕ್ತವಲ್ಲ.

* * * *

3. ಪುಣ್ಯಸ್ಯ ಫಲಮಿಚ್ಛಂತಿ ಪುಣ್ಯಂ ನೇಚ್ಛಂತಿ ಮಾನವಾಃ ।
ಪಾಪಸ್ಯತು ನಹೀಚ್ಛಂತಿ ಪಾಪಂ ಕುರ್ವಂತಿ ಯತ್ನತಃ ॥
—ಮಹಾಭಾರತ

ಜನರು ಪುಣ್ಯ ಕೆಲಸಗಳನ್ನು ಮಾಡುಲು ಇಷ್ಟಪಡುವುದಿಲ್ಲ' ಆದರೆ ಪುಣ್ಯದ ಫಲ ಸಿಕ್ಕುವುದಾದರೆ ಪಡೆಯುಲು ಆಸೆಯುಳ್ಳವರಾಗುತ್ತಾರೆ. ಇವರಿಗೆ ಪಾಪದ ಫಲದಲ್ಲಿ ಇಚ್ಛೆಯಿಲ್ಲ, ಆದರೆ ಪ್ರಯತ್ನ ಪಟ್ಟಾದರೂ ಈ ಪಾಪ ಕಾರ್ಯವನ್ನು ಮಾಡುತ್ತಾರೆ.

* * * *

# ಅಮೃತ ಬಿಂದು

"ಉದ್ಧರೇತ್ ಆತ್ಮನಾತ್ಮಾನಂ"
ನಮ್ಮನ್ನು ನಾವು ಉದ್ಧಾರ ಮಾಡಬೇಕು. ನಮ್ಮ ವ್ಯಕ್ತಿತ್ವವನ್ನು ನಾವು ಬೆಳಸಿಕೊಳ್ಳ ಬೇಕು. ಅಂತೆಯೇ ನಮ್ಮತನ ಮತ್ತು ರಾಷ್ಟ್ರೀಯ ಭಾವನೆಯನ್ನು ನಾವು ಬೆಳೆಸಿ ಉಳಿಸಿಕೊಳ್ಳಬೇಕು. ಇಂದು ನಮ್ಮ ರಾಷ್ಟ್ರೀಯ ಭಾವನೆಯು ಜಾತೀಯ ಭಾವ ನೆಯಾಗಿ ಬೆಳೆದು ಅಪಾರ್ಥವಾಗಿಬಿಟ್ಟಿದೆ. ನಾನು ಹಿಂದೂ, ಹಿಂದೂ ಧರ್ಮದವ, ಹಿಂದೂ ದೇಶದವನು ಎಂದು ಹೇಳಿಕೊಳ್ಳು ವುದು ಅಪರಾಧವಾಗಿಬಿಟ್ಟಿದೆ. ಈ ಅಪಾ ರ್ಥಕ್ಕೆ ಕಾರಣವೆಂದರೆ ಸಾಮಾಜಿಕ ರಾಷ್ಟ್ರೀ ಯ ಮನೋಭಾವವಿಲ್ಲದವರು ಆಡಳಿತಕ್ಕೆ ಬರುತ್ತಿರುವುದು. ಮತ್ತು ರಾಷ್ಟ್ರೀಯತೆಯ ಪೂರ್ಣ ಪರಿಚಯವಿಲ್ಲದಿರುವುದು. ಇದೊಂ ದು ಅಪಾಯಕಾರಿ ಪಿಡುಗು ನಮ್ಮ ಹಿಂದೂ ಧರ್ಮಕ್ಕೆ. ಈ ಪಿಡಿಗಿಗೆ ಮದ್ದಾಗಿ ಭಾರತೀ ಯ ಮನೋಭಾವನೆ ಬೆಳೆಯಬೇಕು. ನಾವು ಊಟಮಾಡುವ ಅನ್ನದಿಂದಲೇ! ನಮಗೆ ಬರುವ ರೋಗಗಳಿಗೆ, ನಮ್ಮ ಗಿಡಮರಗಳಿಂ ದ ತಯಾರಿಸಿದ ಗಿಡಮೂಲಿಕೆಯೇ ನಿವಾ ರಣಾ ಮೂಲಿಕೆಯಾಗಬೇಕು. ಅಂತೆಯೇ ನಮ್ಮತನ ಉದ್ಧಾರಕ್ಕೆ ನಮ್ಮದೇ ಆದ ಧರ್ಮ ಪದ್ಧತಿಗಳನ್ನು ಅನುಸರಿಸಬೇಕು. ದೇಶ ಧರ್ಮದ ಉದ್ಧಾರ ಕಾರ್ಯದಲ್ಲಿ ಒಗ್ಗಟ್ಟಿನಿಂದ ಕೆಲಸ ಮಾಡಬೇಕು.

—ದುಂಬಿ

# ಸುಶೀಲೆಗೆ ಸೋದರನ ಓಲೆಗಳು (೧)

—ಎನ್. ಎಸ್. ಗದಗಕರ್.

ಶ್ರೀನಿಕೇತನ ಧಾರಾನಗರಿ..............

ಸುಶೀಲೆಗೆ ಬಂಧುವಿನ ಆಶೀರ್ವಾದಗಳು ಇದೇನು? ಅಣ್ಣನು ಹದಿನೆಂಟನೆಯ ಶತಮಾನಕ್ಕೀಳಿದನೆಂದು ಸುಶೀಲಾ, ನೀನು ಚಡಿಪಡಸಬೇಡ, ಹಳಹಳಿಸಬೇಡ. ಆಶೀರ್ವಚನ ಪದ್ಧತಿ ಅತ್ಯಂತ ಮಂಗಲಕರ ಆದಿ ಬುನಾದಿ ಕಾಲದಿಂದ ನಮ್ಮ ಸಂಸ್ಕೃತಿಯಲ್ಲಿ ನೆಲಸಿರುವುದು ಅದನ್ನೇ ಬಿಟ್ಟು ಒಬ್ಬರಿಗೊಬ್ಬರು ಉರುಟು ಮಾತಾಡಬೇಕೆ? Love begets love ಸುಶಿ?

ಇರಲಿ ಸುಶೀಲಾ, ನಿನ್ನ ಮೊನ್ನಿನ ಪತ್ರ ನೋಡಿ ನನಗೆ ಮಬ್ಬು ಬಂದಿತು. ನಿನ್ನಲ್ಲಿ ಕಾಲೇಜು ಹುಡುಗಿಯರ ವಿಲಾಸಿ ಪ್ರವೃತ್ತಿ ಇಲ್ಲದ್ದನ್ನು ಕಂಡು ಆಶ್ಚರ್ಯಚಕಿತನಾದೆ. ನೀನು ಸಮಾಜ ಜೀವಿಯಾದುದು ಕಂಡು ಹರುಷ ಉಕ್ಕಿತು. ನಿನ್ನಲ್ಲಿ ಸಾಮಾಜಿಕ ಪ್ರಜ್ಞೆ ತಲೆದೋರಿದುದು ಶುಭ ಲಕ್ಷಣ.

ಇದೇನು? ಅಣ್ಣನ ನಿಗೂಢ ಮಾತೆಂದು ಚಿಂತಿಸಬೇಡ ನೇರವಾಗಿ ವಿಷಯಕ್ಕೆ ಬರುತ್ತೇನೆ. ನಿನ್ನ ಗೆಳತಿಯೊಬ್ಬಳು ಮದುವೆ ಆಗಿ ಕಾಲೇಜು ಬಿಟ್ಟಳು ಅರ್ಧಕ್ಕೆ ಎಂದು ಬರೆದಿರುವಿ. ಕೇಳಿ ಕೆಡುಕೆನಿಸಿತು. ಆಕೆಗೆ ವರದಕ್ಷಿಣೆ ಪೂರೈಸಲು ತಂದೆಗೆ ಪೇಚಾಯಿತೆಂದು ಬರೆದಿರುವಿ. ಅವರು ಕೋರ್ಟಿನಲ್ಲಿ ಲಾಯರೆಂದಿರುವೆ. ಅಂದ ಮೇಲೆ ಮದುವೆಗಾಗಿ ಬಹಳ ಹಣ ನೀರಿನಂತೆ ಸುರಿದುದು ಅಚ್ಚರಿಯಲ್ಲ!

ವರದಕ್ಷಿಣೆ ಬೇಕಾಗಿದೆ ತೀರಾ ನಿಜ. ಆದರೆ ವ್ಯವಹಾರದಲ್ಲಿ ಮುಚ್ಚು ಮರೆ ನಡೆಯುವುದು. ವರೋಪಚಾರದ ಹೆಸರಿನಲ್ಲಿ ಕನ್ಯಾಪಿತನ ಸುಲಿಗೆ ನಡೆಯುವುದು. ವರ ಎಂಜಿನಿಯರ್ ಇದ್ದರೇನಾಯಿತು? ಹುಡುಗಿ-ವಿಮಲಾ ನಿನ್ನ ಗೆಳತಿ—ಕಲಿತವಳೆಂದು ಸಂತೋಷದಿಂದ ಮಾವ ಕೊಟ್ಟಿದ್ದನ್ನೇ ಅಳಿಯ ಸ್ವೀಕರಿಸಲಿಲ್ಲ ವೇಕೊ?

ಸುಶೀಲಾ, ಎಲ್ಲರೂ ವರದಕ್ಷಣೆಗಾಗಿ ಆಸೆ ಪಡುವರೆಂದು ನಾನು ಹೇಳಲಾರೆ. ಒಳ್ಳೆ ಎಂ.ಕಾಂ. ಆದ ಸಿರಿವಂತ ವರನೊಬ್ಬ ನನ್ನ ಗೆಳೆಯ—ಕೇವಲ ರೂಪಕ್ಕೆ—ಕನ್ಯೆಯ-ಮರುಳಾಗಿ ಎರಡೂ ವರ್ಷಗಳ ವೆಚ್ಚ ಕೊಟ್ಟು ಲಗ್ನ ಮಾಡಿಕೊಂಡ. ಇದು ಇತಿಹಾಸದ ಪುಟವಾಯಿತು! ಸ್ವರ್ಣ ಪುಟ ಅನ್ನು ಬೇಕಾದರೆ.

ಏನು? ನನಗೇ ಕೈ ಹಚ್ಚಬೇಕೆಂದಿರುವೆಯೇನು? ಸುಶಿ, ನನ್ನ ಲಗ್ನದ ಸುದ್ದಿ ನಿನಗೆ ಕೇಳಿ ಗೊತ್ತಾಗಿದೆ ನಿಜ. ನನಗೆ ಆಗ ವರದಕ್ಷಿಣೆಯ ಹುಚ್ಚೇ ಇರಲಿಲ್ಲ. ಹೆಚ್ಚೇನು? ಲಗ್ನದ ಸುಸತ್ವದ ಕಲ್ಪನೆ ಕೊಡ ಇರಲಿಲ್ಲ. ಜೂನಿಯರ್ ಬಿ.ಎ., ದಲ್ಲಿ ಲಗ್ನವಾಯಿತು. ಕನ್ಯೆ ಕಲಿತವಳು; ಸಾಕಷ್ಟು ಸುರೂಪಿ ಎಂದು ಒಪ್ಪಿದೆ. ಕಳುವೂವಾದ ಕಾಲಕ್ಕೆ ನಮ್ಮ ಅಕ್ಕ-ಮೈನಕ್ಕನ—ಮಾತು ಕೇಳಿ ಸಿಟಗೊಂಡು ಕುಳಿತೆ. ಆಗಿನ ಕಾಲಕ್ಕೆ ೩೫ ರೂಪಾಯಿಯ ಒಳ್ಳೆ 'Soldier' ವಾಚು ಬಂದಿತು. ಅದು ಕೇವಲ ಎರಡು ಸಲ ರಿಪೇರಿ ಕಂಡಿವೆ ಇಂದಿನವರೆಗೆಂದರೆ!

ನನ್ನ ಅಭಿಪ್ರಾಯ ಹೇಳಲಾ ಸುಶಿ? ವರದಕ್ಷಿಣೆಯ ಬದಲು ವಧುದಕ್ಷಿಣೆಯ ಪಾಯಾ ಬೀಳಬೇಕು ಏಕೆ ಬೀಳಬಾರದು ಹೇಳು? 'ಹೆಣ್ಣು ಹೆಣ್ಣೆಂದೇತಕೆ ಬೀಳುಗಳೆವರು ಕಣ್ಣು ಕಾಣದ ಗಾವಿಲರು?' ಎಂಬ ಸಾಜೆಯ ಹೊನ್ನಮ್ಮನ ಹೊನ್ನಿನಂತಹ ಮಾತು ನೆನಪಾಗಲೊಲ್ಲದೇನು?

ಅದರೂ ನೋಡು, ನಮ್ಮ ಪ್ರಾಚೀನ 'ಸಪ್ತಪದಿ' ಪರಂಪರೆಯ ಲಗ್ನಕ್ಕೆ ಮನ್ನಣೆ ಬಹಳ. ವಧೂವರರು ಪರಸ್ಪರ ಒಪ್ಪುವುದು ಮೊದಲ ಮಾತು. ಆಮೇಲೆ ಉಳಿದ ಉತ್ಸವದ ಪ್ರಶ್ನೆ ತಂದೆ ತಾಯಿ ಬಂಧು ಬಳಗದ್ದು. ಲಗ್ನಕ್ಕೆ ಪಾವಿತ್ರ್ಯ, ಸಾಮಾಜಿಕ ಸ್ವರೂಪ ಬೇಕು.

(29 ನೇ ಪುಟನೋಡಿ)

ಮುಂದುವರೆದ ಲೇಖನ

# ಶ್ರೀ ಸಿದ್ಧಗಂಗಾ ಕ್ಷೇತ್ರ: ಪರಿಸರ ಮತ್ತು ಇತಿಹಾಸ

## (ತತ್ತ್ವಶಾಸ್ತ್ರ ದೃಷ್ಟಿಯಿಂದ ಮಹತ್ವದ ಕೃತಿಗಳು)

—ಚನ್ನಪ್ಪ ಎರೇಸೀಮೆ

ಕನ್ನಡ ಸಾಹಿತ್ಯಕ್ಷೇತ್ರದತ್ತ ಶ್ರೇಷ್ಠ ಕೃತಿಗಳೆಂದೂ ತತ್ತ್ವಶಾಸ್ತ್ರ ದೃಷ್ಟಿಯಿಂದ ಜಗದ್ವಿಖ್ಯಾತಕೃತಿಗಳೆಂದೂ ಖ್ಯಾತವಾಗಿರುವ ಗುಮ್ಮಳಾಪುರದ ಸಿದ್ಧಲಿಂಗ ದೇವರ ಶೂನ್ಯ ಸಂಪಾದನೆ, ಶಿವಗಣಪ್ರಸಾದಿ ಮಹಾದೇವಯ್ಯಗಳ ಶೂನ್ಯಸಂಪಾದನೆ, ಗೂಳೂರು ಸಿದ್ಧವೀರಣ್ಣಒಡೆಯರ ಶೂನ್ಯಸಂಪಾದನೆ' ಇತ್ಯಾದಿ ಅನೇಕ ಶೂನ್ಯಸಂಪಾದನೆಗಳು ಸಿದ್ಧಗಂಗೆ-ಶಿವಗಂಗೆಗಳ ಪರಿಸರದಲ್ಲಿ ಹುಟ್ಟಿಬೆಳೆದು ಬೆಳಕು ಕಂಡ ಅಪೂರ್ವಕೃತಿಗಳಾಗಿ ಕಲ್ಯಾಣದ ಶರಣರ ತತ್ತ್ವಜ್ಞಾನವನ್ನು ಜನತೆಯಲ್ಲಿ ಪ್ರಸಾರ ಮಾಡಿದವುಗಳಾಗಿವೆ. ಇವೂ ಅಲ್ಲದೆ ಹಲಗೆದೇವರ ಶೂನ್ಯಸಂಪಾದನೆಯೂ ಕೂಡ ಇದೇ ಪರಿಸರದಲ್ಲಿ ಮೂಡಿಬಂದ ಒಂದು ಶ್ರೇಷ್ಠಕೃತಿಯಾಗಿದೆ. ಇವನನ್ನು ಪ್ರತ್ಯಕ್ಷ ವೀರಭದ್ರಾವತಾರಿ ಎಂದೇ ಕರೆಯಲಾಗತ್ತಿತ್ತು. ಆದುದರಿಂದ ಈ ಪಂಥವು. ಮತ್ತೊಮ್ಮೆ ಕಲ್ಯಾಣದ ಬಸವಾದಿ ಪ್ರಮಥರ ತತ್ತ್ವಜ್ಞಾನ ಪ್ರಕಾಶವನ್ನು ಬೆಳಗಿದುದೆಂದು ಹೇಳಲು ಅನುಮಾನವೇ ಇಲ್ಲ. ಈ ಮಾತಿನ ಹಿನ್ನೆಲೆಯಲ್ಲಿ ಇಲ್ಲಿನ ಜನಜೀವನದ ತತ್ತ್ವಜ್ಞಾನದ ಹಿರಿಮೆಯನ್ನು ಮನಗಾಣಬಹುದು. ಇವಲ್ಲದೆ ಗುಬ್ಬಿಯ ಮಲ್ಲಣ್ಣ (1475)ನ ಗಣಭಾಷಿತ ರತ್ನಮಾಲೆ, ವಾತುಲತಂತ್ರ ಟೀಕೆ, ಇವನ ಮೊಮ್ಮಗನಾದ ಮಲ್ಲಣಾರ್ಯನ ವೀರಶೈವಾಮೃತ ಮಹಾಪುರಾಣ ಮತ್ತು ಭಾವಚಿಂತಾರತ್ನ, ಗುಬ್ಬಿಯ ಚನ್ನಬಸವೇಶ್ವರರ ಕ್ಷೇತ್ರಜ್ಞಸುಮನೋವಾದ, ಶಾಂತೇಶ ಮತ್ತು ವಿರಕ್ತ ತೋಂಟದಾರ್ಯರ ಸಿದ್ಧೇಶ್ವರ ಪುರಾಣಗಳು, ಜೀರಮಾಂಕಕಾವ್ಯಗಳೂ ಇದೇ ಭೂಮಿಯಿಂದ ಆವಿರ್ಭವಿಸಿವೆ. ವಚನಸಂಪಾದಕರಾದ ಚನ್ನಂಜೇದೇವರು ಮತ್ತು ಎಳಮಲೆಯ ಗುರುಶಾಂತ ದೇವರು, ತ್ರಿವಿಧಿ ಕರ್ತೃವಾದ ಶೀಲವಂತಯ್ಯ ಟೀಕಾಕಾರನಾದ ಸಂಪಾನೆಯ ಗುರುಲಿಂಗದೇವ, ಅನುಭವಸೂತ್ರದ ಟೀಕಾಕಾರನಾದ ಚೆನ್ನಮಲ್ಲಿಕಾರ್ಜುನ, ಚತುರಾಸ್ಯಪುರಾಣ ಕರ್ತೃವಾದ ಸಂಪದಾನೆಯ ಕವಿ ಪರ್ವತೇಶ, ಅನುಭವಕಂದ ಕೃತಿಕಾರನಾದ ಕವಿಶಾಂತ, ಅಮೃತೇಶ್ವರ ಭಾಷ್ಯದ ಕರ್ತೃವಾದ ಸಪ್ಪೆಯಾರ್ಯರೇ ಮೊದಲಾದವರು ಹರದನಹಳ್ಳಿ ಪಿಠಾಚಾರ್ಯರ, ಮುಖ್ಯವಾಗಿ ಸಿದ್ಧಲಿಂಗೇಶ್ವರರ ಕ್ರಾಂತಿಯ ಫಲವಾಗಿ ಪ್ರಕಾಶಕ್ಕೆ ಬಂದು ಈ ಪರಿಸರದಲ್ಲಿಯೇ ಬೆಳಗಿದ ಮಹಾಕವಿಗಳು ಮತ್ತು ದಾರ್ಶನಿಕರೆಂದು ತಿಳಿದರೆ ಸಾಕು.[9] ಈ ಪರಿಸರವನ್ನು ನಾವು ಹರದನಹಳ್ಳಿಯಿಂದ ಗುಮ್ಮಳಾಪುರ,

8 ಸಿದ್ಧಲಿಂಗ ಶಿವಯೋಗಿ: ಮೈಸೂರು ವಿ.ವಿ. [1974]

9 ತೋಂಟದ ಸಿದ್ಧಲಿಂಗೇಶ್ವರರ ಶಿಷ್ಯ ಪರಂಪರೆ ಬಹುಮುಖವಾದುದು. ಇವರ ಶಿಷ್ಯಪರಂಪರೆಗೆ ಒಂದಿಲ್ಲೊಂದು ದೃಷ್ಟಿಯಿಂದ ಸೇರಿದ್ದ ಕವಿಗಳ ದಾರ್ಶನಿಕ ಕೃತಿಗಳು ವಿಪುಲ ಸಂಖ್ಯೆಯವು. ಈ ಎಲ್ಲ ಕೃತಿಗಳೂ ವೀರಶೈವ ತತ್ತ್ವಶಾಸ್ತ್ರ, ಬಸವಾದಿಪ್ರಮಥರ ವಚನಗಳ ಸಂಪಾದನೆ, ವೀರಶೈವ ಮಹಾಪುರುಷರ ಪುರಾಣಗಳು, ವೀರಶೈವ ಶರಣರು, ಶರಣೆಯರು, ಅವರುಗಳ ಸ್ಥಾನ ವಿಶೇಷಗಳೇ ಮೊದಲಾದವುಗಳ ಪಟ್ಟಿಯನ್ನು ಕೊಡುವ ವಿಷಯಗಳು, ವೀರಶೈವಾಚಾರ ವಿಚಾರಗಳು, ತ್ರಿವಿದಿಗಳು, ಟೀಕೆಗಳು, ಶೂನ್ಯಸಂಪಾದನೆಗಳೇ ಮೊದಲಾದ ವಿಷಯುಗಳಿಂದ ಕೂಡಿದವುಗಳಾಗಿ ಸಿದ್ಧಗಂಗೆ ಶಿವಗಂಗೆಯ ಪರಿಸರದಲ್ಲಿ ಒಡಮೂಡಿದವುಗಳಾಗಿವೆ. ಈ ದೃಷ್ಟಿಯಿಂದ ಈ ಪರಿಸರದ ವಿದ್ವಾಂಸರ ದಾರ್ಶನಿಕ, ಕವಿಗಳ, ಟೀಕೆಟಿಪ್ಪಣಿಕಾರರ ಅನುಭವ, ವಿದ್ವತ್ತು, ಬಹುಶ್ರುತತ್ವಗಳೇ ಮೊದಲಾದವನ್ನು ಊಹಿಸಬಹುದಾಗಿದೆ.

ಚಿಕ್ಕಬಳ್ಳಾಪುರ, ಬಿಜ್ಜಾವರ, ಎಳನಡು, ಗುಬ್ಬಿ, ಎಡೆಯೂರು, ಮೈಸೂರು, ಹರದನಹಳ್ಳಿಯನ್ನು ಸೇರಿಸುವಂತೆ ಒಂದು ಗೆರೆ ಎಳೆದರೆ ಎಷ್ಟಾಗವುದೋ ಅಷ್ಟು ಭೂಭಾಗವೆಂದು ಸ್ಥೂಲವಾಗಿ ತಿಳಿಯಬೇಕು. ಸ್ವಲ್ಪ ಹೆಚ್ಚುಕಡಿಮೆ ಒಳಹೊರಗೆ ಹೋಗಬಹುದು. ಒಟ್ಟಿನಲ್ಲಿ ಈ ಭೂಭಾಗವಲ್ಲಿ ಶಿವಗಂಗೆ-ಸಿದ್ಧಗಂಗೆ-ಗೂಳೂರು ಗುಬ್ಬಿ-ಎಡಯೂರು-ಹರದನಹಳ್ಳಿ-ಕಲ್ಲೆಯ-ಗುಮ್ಮಳಾಪುರ-ನಂದಿಪುರ-ಈ ಊರುಗಳು ವೀರಶೈವ ಸಾಹಿತ್ಯ-ಸಂಸ್ಕೃತಿ, ಧರ್ಮಗಳ ಬೆಳವಣಿಗೆಯ ದೃಷ್ಟಿಯಿಂದ 12 ನೇ ಶತಮಾನದಿಂದ 18ನೆಯ ಶತಮಾನದವರೆಗೆ ಬಹು ಮಹತ್ವದ ಪಾತ್ರವನ್ನು ವಹಿಸಿದ್ದ ಸ್ಥಳಗಳೆಂದು ತಿಳಿದರೆ ಸಾಕು.

### ಸಿದ್ಧಗಂಗಾ ಪರಿಸರದಲ್ಲಿ ಮಠಮಾನ್ಯಗಳು

ಸಿದ್ಧಗಂಗಾ ಪರಿಸರದಲ್ಲಿ ಬೆಳೆದು ಬಂದಿರುವ ಮಠಮಾನ್ಯಗಳ ಸಂಖ್ಯೆ ಇನ್ನಿತರ ಯಾವ ಭಾಗದಲ್ಲೂ ನಾವು ಕಾಣಲು ಶಕ್ಯವಿಲ್ಲದಷ್ಟು ವಿಪುಲವಾಗಿದೆ. ಇವುಗಳಲ್ಲಿ ಗುರುವರ್ಗದವರ ಮಠಗಳೂ, ವಿರಕ್ತಮಠಗಳೂ ಸೇರಿಕೊಂಡಿವೆ. ಮುಖ್ಯವಾಗಿ ಕೆಳಗೆ ಕಂಡ ಈ ಮಠಗಳನ್ನು ಉಲ್ಲೇಖಿಸಬಹುದಾಗಿದೆ. ಈ ಪೂರ್ವದಲ್ಲಿ ಶಿವಗಂಗೆ ಒಂದರಲ್ಲೇ 64 ಮಠಗಳಿದ್ದವೆಂದು ತಿಳಿಸಿದೆ. ಈಗ ಮೂರು ನಾಲ್ಕು ಮಠಗಳು ಮಾತ್ರ ಅಸ್ತಿತ್ವದಲ್ಲಿವೆ. ಶಿವಗಂಗೆಯ ಪೂರ್ವ ದಿಗ್ಭಾಗದಲ್ಲಿರುವ ಕಂಬಾಳು ಮರುಳಸಿದ್ಧರ ಮಠ, ಕಂಚುಗಲ್ ಬಂಡೇ ಮಠ, ಚಿಲುಮೆಮಠ, ಬಸವಾಪಟ್ಟಣದಲ್ಲಿ ಬೋಳು ಬಸವೇಶ್ವರಸ್ವಾಮಿ ಕ್ಷೇತ್ರ, ಮಸ್ಕಲ್‌ಮಠ, ಸೋಲೂರಿನಲ್ಲಿರುವ ಮೂರು ನಾಲ್ಕು ಮಠಗಳು, ಸೋಲೂರು ಪಕ್ಕದಲ್ಲಿರುವ ಮಹಂತೇಶ್ವರಸ್ವಾಮಿ ಗದ್ದಿಗೆಯಮಠ, ತೋಪಿನಮಠ, ಕಣ್ಣೂರುಮಠ, ತಿಪ್ಪಸಂದ್ರದಮಠ, ಹುತ್ರಿದುರ್ಗ, ಸಾವನದುರ್ಗಗಳಲ್ಲಿರುವ ಮಠಗಳು, ಕಲ್ಲೆಯದ ಸರ್ವಶೀಲೆ ಚನ್ನಮ್ಮನಮಠ, ಶಿವಗಂಗೆಯ ಪಕ್ಕದ ಕಾಚಕಲ್ಲಪ್ಪನ ಬೆಟ್ಟದಲ್ಲಿರುವ ಗದ್ದಿಗೆ, ನೆಲಮಂಗಲದಲ್ಲಿ ಬಸವಣ್ಣದೇವರಮಠವೇ ಮೊದಲಾದ ನಾಲ್ಕು ಮಠಗಳು, ಮಧುಗಿರಿಯಮಠ, ಹುಸ್ಕೂರು, ಗುಡೇಮಾರನಹಳ್ಳಿಗಳಲ್ಲಿರುವ ಮಠಗಳು, ಮಾಗಡಿಯಲ್ಲಿನ 2-3 ಮಠಗಳು ತುಮಕೂರಿನಲ್ಲಿರುವ ಕರಿಬಸವದೇವರ ಮಠವೇ ಮೊದಲಾದ ಐದಾರು ಮಠಗಳು ಸಿದ್ಧಗಂಗೆಯ ಪಕ್ಕದ ದೇವರಾಯ ಪಟ್ಟಣದ ಮಠ, ಸಿದ್ಧನ ಬೆಟ್ಟದಲ್ಲಿರುವ ಗದ್ದುಗೆ, ಬೆಟ್ಟದಹಳ್ಳಿ, ಬೆಟ್ಟಳ್ಳಿ, ಚಕ್ರಬಾವಿ, ಹಿತ್ತಲಹಳ್ಳಿ ತ್ರಿಪುರಾಂತಕೇಶ್ವರ ಮಠಗಳೂ, ಅಂಕನಹಳ್ಳಿಮಠ, ಹುಲಿಯೂರುದುರ್ಗದಮಠ, ಸಾವನದುರ್ಗದ ಹತ್ತಿರದ ಕಲ್ಯಾಣದೇವರಮಠಗಳೇ ಮೊದಲಾದುವು, ಕನಕಪುರದ ದೇಗುಲಮಠ ಚೆನ್ನಪಟ್ಟಣ, ಗೂಳೂರು, ಗುಮ್ಮಳಾಪುರ ಎಡಿಯೂರು, ಹೊನ್ನುಡಿಕೆ ಮಠಗಳು, ಬೆಂಗಳೂರಿನ ಪರಿಸರದಲ್ಲಿರುವ ಸರ್ಪಭೂಷಣ ಮಠವೇ ಮೊದಲಾದ 63 ಮಠಗಳು, ಬಾಣಾವರ, ಮೈಲನಹಳ್ಳಿಮಠ, ಎಲಗನಹಳ್ಳಿ, ತಾವರೆಕೆರೆ, ಹೂಲಿಕಟ್ಟೆ, ವಿರುಪಸಂದ್ರ, ಕಗ್ಗೆರೆ ಮಠಗಳು, ಕಪ್ಪೂರು ಗದ್ದಿಗೆ ಸೋಣವಿನಕೆರೆ, ಗೋಡೆಕೆರೆ, ಕಟ್ಟಿಗೆಹಳ್ಳಿ, ಗುಬ್ಬಿ, ಎಳನಡು, ಕುಣಿಗಲ್ಲಿನ ದಕ್ಷಿಣದಲ್ಲಿ 3 ಮೈಲಿಗಳ ಅಂತರದಲ್ಲಿರುವ ಗವಿಮಠ ಇವೇ ಮೊದಲಾದ ಮಠಗಳನ್ನು ಹೆಸರಿಸಬಹುದಾಗಿದೆ. ಇವಲ್ಲದೆ. ಇನ್ನು ಅನೇಕ ಮಠಮಾನ್ಯಗಳು ಸಿದ್ಧಗಂಗೆ ಮತ್ತು ಶಿವಗಂಗೆಗಳ ಪರಿಸರದಲ್ಲಿ ಹರಡಿ ಷಟ್‌ಸ್ಥಲ ಜ್ಞಾನಜ್ಯೋತಿಯನ್ನು ಹಿಂದಿನಿಂದಲೂ ಆರಗೊಡದಂತೆ ಬೆಳಗಿಸುತ್ತ ಬಂದಿವೆ. ಇಷ್ಟೆಲ್ಲಕ್ಕೂ ಇಲ್ಲಿ ಕಾಲಕಾಲಕ್ಕೆ ನಡೆದ ಅನೇಕ ಮಹಾಪುರುಷರ ಸಿದ್ಧಶಿವಯೋಗಿಗಳ ಸತ್ತ್ವಪೂರ್ಣಕ್ರಾಂತಿಯ ಫಲವೇ ಕಾರಣವಾಗಿದೆ ಎನ್ನಲು ಅಡ್ಡಿಯೇನೂ ಇಲ್ಲ.

### ಸಿದ್ಧಗಂಗಾ ಪರಿಸರದಲ್ಲಿ 19 ಮತ್ತು 20ನೆಯ ಶತಮಾನದಲ್ಲಿ ಈರ್ವರು ಮಹಾನುಭಾವರ ಅವತಾರ

ರೇವಣಸಿದ್ಧರು, ಮರುಳಸಿದ್ಧ, ಸಿದ್ಧರಾಮೇಶ್ವರ, ಗೋಸಲಸಿದ್ಧೇಶ್ವರ, ತೋಂಟದ ಸಿದ್ಧಲಿಂಗಯತೀಶ್ವರ, ಬೋಳ ಬಸವೇಶ್ವರರ ಮೊದಲಾದ ಮಹಾ ಶಿವಯೋಗಿಪುಂಗವರ ಕ್ರಾಂತಿಕ್ಷೇತ್ರವಾದ ಸಿದ್ಧಗಂಗಾ ಮತ್ತು ಶಿವಗಂಗೆಯ ಪರಿಸರ 19 ಮತ್ತು 20ನೆಯ ಶತಮಾನಗಳಲ್ಲೂ ಅಘಟಿತ ಘಟನಾಸಮರ್ಥರೂ ಶಿವಲಿಂಗಲೀಲಾವಿನೋದಚಿತ್ತರೂ ದಾಸೋಹಸದ್ಭಾವಾಸಕ್ತರೂ ಆದ ಈರ್ವರು ಕಾರಣಪುರುಷರಿಗೆ ಜನ್ಮವಿತ್ತು ತನ್ನ ಮಹತ್ವವನ್ನುಳಿಸಿಕೊಂಡು ಬಂದಿದೆ. ಶಿವಯೋಗೀಶ್ವರರ ಆಡುಂಬೊಲವೆನಿಸಿದ ಶಿವಗಂಗಾ ಅವಿಮುಕ್ತ ಕ್ಷೇತ್ರಕ್ಕೆ

ಉತ್ತರದಿಗ್ಭಾಗದಲ್ಲಿ ಸುಮಾರು 3 ಮೈಲಿಗಳ ಅಂತರದಲ್ಲಿರುವ ಲಕ್ಕೂರು ಮತ್ತು ದಕ್ಷಿಣದಿಗ್ಭಾಗದಲ್ಲಿ 3–4 ಮೈಲುಗಳ ಅಂತರದಲ್ಲಿರುವ ವೀರಾಪುರಗಳು ಈರ್ವರು ಯತೀಶ್ವರರ ಜನ್ಮ ಭೂಮಿಗಳು.

ಲಕ್ಕೂರಿನಲ್ಲಿ ಕ್ರಿ.ಶ. ಸುಮಾರು 1860ರ ಹೊತ್ತಿನಲ್ಲಿ ಹುಟ್ಟಿ ಅಲ್ಲಿ ಬಾಲ್ಯಜೀವನ ನಡೆಸಿ, ಸಿದ್ಧಗಂಗಾಕ್ಷೇತ್ರಾಧಿಪತಿಗಳಾಗಿ ಅಘಟಿತಘಟನಾ ಪರಂಪರೆಗಳನ್ನು ಮೆರೆದು ಪುಣ್ಯಭೂಮಿಯಲ್ಲಿ ಸರ್ವಲೋಕೋಪಕಾರದ ಜ್ಞಾನ-ವಿಜ್ಞಾನ-ಧರ್ಮ-ಸಂಸ್ಕೃತಿಯ ಬೆಳವಣಿಗೆಗೆ ಕಾರಣ ಪುರುಷರೆನಿಸಿ ಮಹಾದಾಸೋಹವನ್ನು ಆಚರಿಸಿ 1941ರಲ್ಲಿ ಲಿಂಗೈಕ್ಯರಾದ ಶ್ರೀಮದುದ್ಧಾನ ಶಿವಯೋಗಿಗಳು ಒಬ್ಬರು. ವೀರಾಪುರದಲ್ಲಿ ಕ್ರಿ.ಶ. ಸುಮಾರು 1908 ರಲ್ಲಿ ಜನ್ಮಧಾರಣೆ ಮಾಡಿ 1930 ರಲ್ಲಿಯೇ ಉದ್ಧಾನ ಶಿವಯೋಗಿಗಳ ಕೃಪಾಕಟಾಕ್ಷಕ್ಕೆ ಪಾತ್ರರಾಗಿ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರೆಂದು ನಾಮಕರಣಗೊಂಡು ಉದ್ಧಾನ ಶಿವಯೋಗಿಗಳವರು ಲಿಂಗೈಕ್ಯರಾದ ನಂತರ ಶ್ರೀಕ್ಷೇತ್ರದ ಸರ್ವಲೋಕೋಪಕಾರಕ ಸೇವಾಮನೋಭಾವವನ್ನು ಮುಗಿಲೆತ್ತರಕ್ಕೆ ಏರಿಸಿ 'ನಭೂತೋ ನಭವಿಷ್ಯತಿ' ಎನ್ನುವಂತೆ ಮಾಡಿರುವ, ಮಾಡುತ್ತಿರುವ ಶ್ರೀ ಸಿ. ಪ್ರ. ಶಿವಕುಮಾರಸ್ವಾಮಿಗಳು ಇನ್ನೊಬ್ಬ ಮಹಾಕಾರಣಿಕ ಪುರುಷರು. ಶ್ರೀ ಶಿವಕುಮಾರಸ್ವಾಮಿಗಳವರ ಅದ್ಭುತ ಕ್ರಿಯಾಜ್ಞಾನ ಸಮುಚ್ಚಯದ ನಡೆನುಡಿಗಳಿಂದ ಹರದನಹಳ್ಳಿ, ಪೀಠಾಚಾರ್ಯರ ಪರಂಪರೆಯಲ್ಲಿ ಬೆಳಗಿದ ತೋಂಟದ ಸಿದ್ಧಲಿಂಗೇಶ್ವರರ ಕೀರ್ತಿಗೌರವಗಳನ್ನು ಕಾರ್ಯಮುಖದಿಂದ ವಚನಗಳಿಂದ ಇನ್ನಿತರ ಅವಶೇಷಗಳಿಂದ ತಿಳಿದರೆ, ಅವರಷ್ಟೇ ಪ್ರಭಾವಮುದ್ರೆಯನ್ನುಳ್ಳ ಶ್ರೀ ಶಿವಕುಮಾರ ಸ್ವಾಮಿಗಳವರ ಕ್ರಿಯಾಯೋಗದ ಮಹತ್ತು ಬೃಹತ್ತುಗಳನ್ನು ಪ್ರತ್ಯಕ್ಷ ಕಾಣುವ ಭಾಗ್ಯ ಇಂದಿನ ಪೀಳಿಗೆಗೆ ಉಂಟಾಗಿರುವುದು ಪುಣ್ಯವಿಶೇಷವೆ. 12ನೆಯ ಶತಮಾನದಿಂದ ಇಂದಿನವರೆಗೆ ಸಿದ್ಧಗಂಗಾ ಪರಿಸರದಲ್ಲಿ ಅನೇಕ ಅಗಣಿತ ಮಹಾಮಹಾ ಶಿವಯೋಗಿಗಳವರ ಶಿವಯೋಗದ ಸಾರಭೂತ ಶಾಂತರಸದ ಅವಿಚ್ಛಿನ್ನಸ್ರೋತವಿದ್ದೇ ಇದೆ ಎಂಬುದಕ್ಕೆ ಮತ್ತು ನೆಲದ ಗುಣ ವ್ಯಕ್ತಿತ್ವವನ್ನು ರೂಪಿಸಬಲ್ಲ ವಿಶಿಷ್ಟ ಸಾಮರ್ಥ್ಯವುಳ್ಳದ್ದೆಂಬುದಕ್ಕೆ 19 ಮತ್ತು 20ನೆಯ ಶತಮಾನದ ಈ ಇಬ್ಬರು ಕಾರಣಪುರುಷರು ನಮಗೆ ಜೀವಂತ ನಿದರ್ಶನರಾಗಿದ್ದಾರೆ. ಹರದನಹಳ್ಳಿ ಪೀಠಾಚಾರ್ಯರ ದಿವ್ಯತಪೋಭೂಮಿಯಾದ ಸಿದ್ಧಗಂಗೆಯ ಶುದ್ಧಿ-ಸಿದ್ಧಿ, ಶುಚಿ-ರುಚಿಗಳು ಈ ಈರ್ವರು ಕಾರಣಪುರುಷರಿಂದ ದಿಗಂತ ವಿಶ್ರಾಂತಗೊಂಡಿವೆ. ಈ ಸಿದ್ಧಗಂಗಾಕ್ಷೇತ್ರದಲ್ಲಿ ಈಗ ಏನು ನಡೆಯುತ್ತಿದೆ? ಹೇಗೆ ನಡೆಯುತ್ತಿದೆ? ಈ ಎರಡೂ ಬಿಡಿಸಲಾರದ ಕಗ್ಗಂಟುಗಳೇ. ಶತಮಾನಗಳಿಂದ ಸಂಚಯನಗೊಂಡು ಬಂದ ಮಹಾ ಮಹಾ ಕಾರಣ ಪುರುಷರ ದಿವ್ಯ ತಪಶಕ್ತಿಯ ಕಾಣದ ಕೈ ಇಲ್ಲಿನ ಅನಿಮಿತ್ತಬಂಧುಗಳೂ ಶಿವಯೋಗಿಪುಂಗವರೂ ಆದ ಶ್ರೀ ಶಿವಕುಮಾರ ಮಹಾಸ್ವಾಮಿಯವರ ಅದ್ಭುತ ಕ್ರಿಯಾಶೀಲತೆಗೆ ತೆರೆಯಮರೆಯಲ್ಲಿ ಸಹಾಯಕ್ಕೆ ನಿಂತೇ ಇವೆ ಎನ್ನಿಸುತ್ತದೆ. 'ಇಲ್ಲದಿದ್ದರೆ ಓರ್ವ ವ್ಯಕ್ತಿಯಿಂದ ಇಷ್ಟೆಲ್ಲ ಕಾರ್ಯ ಮಾಡುವುದು ಶಕ್ಯವಿಲ್ಲದ ಮಾತು' ಎಂದು ಶ್ರೀಸ್ವಾಮಿಗಳೇ ಎಷ್ಟೋ ಸಲ ಉಚ್ಚರಿಸಿಕೊಂಡುದು ಸಾಕ್ಷಿಯಾಗಿದೆ. ಶ್ರೀ ಶಿವಕುಮಾರಸ್ವಾಮಿಗಳು ಓರ್ವ ವ್ಯಕ್ತಿಗಳಂತೂ ಅಲ್ಲ. ವ್ಯಕ್ತಿತ್ವದ ಎಲ್ಲೆಕಟ್ಟನ್ನು ಆ ಮಹಾಪುರುಷರಿಗೆ ಅನ್ವಯಿಲುವುದೂ ಕಷ್ಟ. ಅದು ಅನೇಕ ಮಹಾ ಮಹಾಕಾರಣ ಪುರುಷರ ಕಾರಣ ಶರೀರ ಬಬ್ಬುಳಿಗೊಂಡ ಒಂದು ತೇಜೋವಿಶೇಷ. ಅದು ಆಕಾರಗೊಂಡು ಕ್ರಿಯಾಮುಖದಲ್ಲಿ ನಮ್ಮ ಕಣ್ಣಿಗೆ ಗೋಚರವಾಗುತ್ತದೆ ಎಂದೇ ನಮ್ಮ ಭಾವನೆ. ಅವರೆ ಬೇಡುವ ಜಂಗಮರಂತೂ ಅಲ್ಲ. ಆ ಜಂಗಮಪುಂಗವರಿಗೆ ಬೇಡಿಸಿಕೊಳ್ಳುವ ಶಿಷ್ಯ ಸಂಪತ್ತೂ ಇಲ್ಲ. ಅದ್ಭುತ ಪರುಷಶಕ್ತಿಗೆ ಅಭಾವದ ತೆರೆಯೆಂದೂ ಅಡ್ಡ ಬರಲೇ ಇಲ್ಲ. ನೆನೆಯದ ಮುನ್ನ ಬೇಕುಬೇಕಾದ ವಸ್ತು ಸಂಚಯನ, ಎಲ್ಲವೂ ದಾಸೋಹಕ್ಕೆ ನೈವೇದ್ಯ; ನಿಚ್ಚನಿಚ್ಚ ಅಲ್ಲಿ ನಡೆಯುವ ಖರ್ಚು ವೆಚ್ಚಗಳು ಶ್ರೀಮಂತಿಕೆಯಿಂದಂತೂ ಅಲ್ಲವೇ ಅಲ್ಲ. ಈ ಖರ್ಚುವೆಚ್ಚಗಳು, ದಾಸೋಹ ವ್ಯವಸ್ಥೆಗಳು ಇನ್ನಿತರ ಲೋಕೋಪಕಾರಕ ಕ್ರಿಯೆಗಳು ನಡೆಯುವುದು ಬೇರೆ ರೀತಿಯ ಶ್ರೀಮಂತಿಕೆಯಿಂದ. ಈ ಶ್ರೀಮಂತಿಕೆ ಇಲ್ಲಿಯ ಶ್ರೀಗಳವರಿಗೆ ಉಂಟಾಗಿದ್ದು ನಿಷ್ಕಾಪಟ್ಯ ಲಿಂಗತಪಸ್ಸಿನ ಪ್ರಭಾವದಿಂದ. ಶ್ರೀ ಶಿವಕುಮಾರ ಸ್ವಾಮಿಗಳವರ 50 ವರ್ಷಗಳ ದೀರ್ಘ ತಪಸ್ಸು. ಸಕಲ ಜೀವಿಗಳ ಸುಖದ ಮಾರ್ಗದರ್ಶನಕ್ಕೆ ವಿನಿಯೋಗವಾಗಿದೆ. 'ಕೊಡುವವ ಸಂಗ, ಕೊಳ್ಳುವವ

ಸಂಗಮದೇವ' ಈ ಮಾತು ಕ್ಷೇತ್ರಕ್ಕೆ ಪೂರ್ಣ ಅನ್ವಯ.

**ಕಲ್ಯಾಣಕ್ರಾಂತಿಯ ನಂತರ ಸಿದ್ಧಗಂಗಾ-ಶಿವಗಂಗಾ ಪರಿಸರಕ್ಕೆ ಬಂದ ಮಹತ್ವ**

ಕ್ರಿ.ಶ. 1168ರ ಸುಮಾರಿನಲ್ಲಿ ಕಲ್ಯಾಣದ ಕಲಚೂರ್ಯ ಬಿಜ್ಜಳನ ಅವಸಾನದೊಡನೆ ಬಸವಣ್ಣನವರ ಮತ್ತು ಅವರ ಅನುಯಾಯಿಗಳ ವಿಶ್ವಮಾನ್ಯ ತತ್ತ್ವ ಪ್ರಸಾರಕಾರ್ಯ ಸ್ಥಗಿತಗೊಂಡು ಹೋಯಿತು. 'ಬ್ರಾಹ್ಮಣ ಮೊದಲುಗೊಂಡು ಅಂತ್ಯಜ ಕಡೆಯಾಗಿ, ಶಿವಭಕ್ತರಾದವರನ್ನೆಲ್ಲ' ಒಂದುಗೂಡಿಸಿ ರಾಷ್ಟ್ರ ಶಕ್ತಿಗೊಂದು ಅಪೂರ್ವ ಚಾಲನೆ ಕೊಡಲು ಶರಣರು ಮಾಡಿದ ಕ್ರಾಂತಿಗೆ ಘೋರವಾದ ರಾಜಕೀಯ ವಿಪ್ಲವದ ಬಂಡೆಗಲ್ಲುರುಳಿ ಅವರೆಲ್ಲ ಜರ್ಝರಿತರಾಗಿ ದಿಕ್ಕುದಿಕ್ಕುಗಳಿಗೆ ಚದುರಿದರು. ಬಸವಣ್ಣನವರು ಕಪ್ಪಡಿಸಂಗಮದಲ್ಲಿ ತಮ್ಮ ಕೊನೆಯ ದಿನಗಳನ್ನು ವಿಷಾದದಿಂದ ಕಳೆದರು. ಚೆನ್ನಬಸವಣ್ಣನವರ ನೇತೃತ್ವದಲ್ಲಿ ಒಂದು ಗುಂಪು ಈಗಿನ ಕಾರವಾರ ಜಿಲ್ಲಾ ಸುಪಾ ತಾಲ್ಲೋಕಿನಲ್ಲಿರುವ ಉಳುವೆಗೆ ನಡೆದು ಅಲ್ಲಿ 'ಮಹಾಮನೆ' ಎಂಬೊಂದು ಗವಿಯಲ್ಲಿ ಸೇರಿ ಶಿವಾನುಭಾವ ಪ್ರಚಾರ ಕಾರ್ಯ ಕೈಗೊಂಡರು; ಅಲ್ಲಿಗೂ ವೈರಿಗಳು ಬೆನ್ನಟ್ಟಿ ಹೋಗಿ ಆ ಶರಣ ಸಮುದಾಯವನ್ನೆಲ್ಲ ತೀರಿಸಿದರು. ಇನ್ನೊಂದು ಗುಂಪು ಶ್ರೀಶೈಲದತ್ತ ನಡೆದು ದಿಕ್ಕುದಿಕ್ಕುಗಳಲ್ಲಿ ಚೆದುರಿ ಅಲ್ಲಲ್ಲಿ ಮಠಮಾನ್ಯಗಳನ್ನು ಮಾಡಿಕೊಂಡು ತಮ್ಮ ತಮ್ಮ ನಿಜಾಚರಣೆಯಲ್ಲಿ ನಿರತರಾದರು. ಕಲ್ಯಾಣದಲ್ಲಿ ಒಂದೇ ಕಡೆಗೆ ಇವರೆಲ್ಲ ಮತ್ತೊಮ್ಮೆ ಸೇರುವೆಗೊಳ್ಳಲು ಅವಕಾಶ ಒದಗಲೇ ಇಲ್ಲ. ಶ್ರೀಶೈಲದ ಕಡೆಗೆ ಹೋದ ಶರಣರ ತಂಡದವರ ಬಾಯಿಂದ ಕಲ್ಯಾಣದ ಕ್ರಾಂತಿಯ ಕಥೆ ಮತ್ತು ಬಸವಣ್ಣನವರ ವ್ಯಕ್ತಿತ್ವದ ಹಿರಿಮೆ ಗರಿಮೆಗಳನ್ನು ಪಾಲ್ಕುರಿಕೆ ಸೋಮನಾಥರು, ಇನ್ನೂ ಬಾಲಕರಾಗಿರುವಾಗಲೇ, ಕೇಳಿ ಪ್ರಭಾವಿತರಾಗಿ, ತೆಲುಗಿನಲ್ಲಿ ಪ್ರಥಮತ: ಬಸವಣ್ಣನವರ ಬಗೆಗೆ ಮಹಾ ಪುರಾಣವೊಂದನ್ನು ನಿರ್ಮಿಸಿದನೆಂದು ಈಗ ಹೇಳಲಾಗುತ್ತಿದೆ. ಬಸವಣ್ಣನವರ ಬಗೆಗೆ ಅಪಾರ ಗೌರವವನ್ನು ತಳೆದು ಅದ್ಭುತರಮ್ಯವಾದ ಪುರಾಣ ಮತ್ತು ಸ್ತೋತ್ರ ಗೀತೆಗಳನ್ನು ತೆಲುಗಿನಲ್ಲಿ ಬರೆದು ಮೊದಲು ಪ್ರಸಾರ ಮಾಡಿದವನೇ ಪಾಲ್ಕುರಿಕೆ ಸೋಮನಾಥ. ಈ ದೃಷ್ಟಿಯಿಂದ ಒಂದು ನೂತನ ಸಾಹಿತ್ಯ ಸಂಪ್ರದಾಯವೇ ಬೆಳೆದುಹೋಯಿತು. ಬಸವಣ್ಣನ ನಡೆನುಡಿ ಆಚಾರ ವ್ಯವಹಾರಗಳು ಈ ನೂತನ ಶರಣಗಣದ ಮಾರ್ಗಕ್ಕೆ ಆದರ್ಶವಾಗಿ ಬಸವಣ್ಣ ಮಂತ್ರಪುರುಷನೆನಿಸಿದನು. ಇದೇನೇ ಇರಲಿ ಇನ್ನೊಂದು ತಂಡ ದಕ್ಷಿಣದ ಸುಪ್ರಸಿದ್ಧ ಕ್ಷೇತ್ರವನಿಸಿದ ಶಿವಗಂಗೆ ಕಡೆಗೆ ಬಂತು. ಶಿವಗಂಗೆಯ ಕಡೆಗೆ ಬಂದವರಲ್ಲಿ ಚಿಕ್ಕಸಿದ್ಧೇಶನೆಂಬುವನು ಮುಖ್ಯನೆಂದು ತೋರುತ್ತದೆ. ಅವನು ಅನೇಕ ಜನ ಚರಮೂರ್ತಿಗಳೊಡನೆ ಬಂದು ಹೊನ್ನಾದೇವಿಯಿಂದ ಕಂಕಣ ಪಡೆದನು. ಈ ಚಿಕ್ಕಸಿದ್ದೇಶ್ವರ ಮತ್ತು ಅನೇಕ ಚರಮೂರ್ತಿಗಳು ಶಿವಗಂಗೆ ಮತ್ತು ಅದರ ಸುತ್ತಮುತ್ತಲ ಪ್ರಾಂತ್ಯದಲ್ಲಿ ಹರಡಿದುದರಿಂದ ಕಲ್ಯಾಣದ ಶರಣರ ನೇರ ಸಂತಾನ ಈ ಭಾಗದಲ್ಲಿ ಪ್ರಸಾರಗೊಳ್ಳಲು ಕಾರಣವಾಯಿತು. ಈ ಪರಿಸರದಲ್ಲಿ ಅನೇಕ ಮಠಮಾನ್ಯಗಳು ಮತ್ತು ಅವನ್ನಾಶ್ರಯಿಸಿ ಮುಂದೆ ವೀರಶೈವ ತತ್ತ್ವಶಾಸ್ತ್ರದ ಅನೇಕ ಮಹತ್ವದ ಕೃತಿರತ್ನಗಳು ಆವಿರ್ಭಾವಗೊಳ್ಳಲು ಕಾರಣವಾಯಿತೆಂದು ಈ ಪೂರ್ವದಲ್ಲಿ ಸಂಕ್ಷೇಪವಾಗಿ ವಿವರಿಸಲಾಗಿದೆ, ಇನ್ನೊಂದು ತಂಡದ ಮುಖ್ಯ ಗುಮ್ಮಣ ಪೆಮ್ಮಣ ಎಂಬ ಹೆಸರಿನ ವ್ರತಿಗಳ ಬಗೆಗೆ ಚೆನ್ನಬಸವಪುರಾಣ ನಮ್ಮ ಗಮನವನ್ನು ಸೆಳೆಯುತ್ತದೆ:-

"................................ .....ಕಲ್ಯಾಣ।
ವಳಿಯಲಾ ಪ್ರಜೆಗಳು ತುರುಕರಾಕ್ಷಸರಾಗ।
ಸುಲಿದು ಸೂರ್ಯಾಡಲಾ ಗುಮ್ಮಣಂ ಪೆಮ್ಮಣಯ್ಯಗಳೆನಿಪ
ವ್ರತಿಗಳಿರದೆ॥
ನೆಲೆಗೆಟ್ಟುಪೋಗಿ ದಕ್ಷಿಣಕಾಶಿಯೆನಿಸಿ ಭೂ।
ತಳದೊಳಗೆ ಮೆರೆವ ಶಿವಗಂಗೆಯ ಸಮೀಪದ ಸು।
ಸ್ಥಳದೊಳಗೆ ಪುರವನುರೆ ರಚಿಸರಾ ಗುಮ್ಮಣಂ ಪೆಮ್ಮ
ಣಯ್ಯಗಳೆಂಬರ್ಸು (62-45)
ಪರಮ ಕೈಲಾಸಕ್ಕೆ ಮಿಗಿಲೆನಿಸಿ ಗುಮ್ಮಳಾ ।
ಪುರವೆಂಬ ನಾಮದಿಂದುದ್ಧರಿಸಲೆಂತೆನಲ್ ।
ಚರಲಿಂಗದಮಳಪಾದೋದಕವನೇ ಮಣ್ಣ ಹಸಿಯ
ಬಿಂದಿಗೆಯ ತುಂಬಿ ।
ಪರಿವಾಣದೊಳಗಿರಿಸಿ ಹೊತ್ತು ಕೊಂಡಾಪುರವ ।
ತಿರುಗಿಸಿ ಬಂದಾ ಮಧ್ಯದಲ್ಲಿ ನಿಕ್ಷೇಪಿಸೀ ।
ಪುರವನೆ ಲಿಂಗದಿಲ್ಲದ ಭವಿಯು ಪುಗಲಳಿಯಲೆನುತಾಜ್ಞಾ
ಪಿಸುವರು ॥ (62-66)

ಗುಮ್ಮಳಾಪುರವೆಂಬ ಹೆಸರಿನ ಸ್ಥಾನವು ನಿರ್ಜತವಾದವರ ಹಿನ್ನೆಲೆಯಲ್ಲಿ ಹಾಗೆ ಕಲ್ಯಾಣದ ಶಿವಶರಣ ಸಮೂಹದ ಶಿವಗಂಗೆಯ ಪ್ರಾಂತಕ್ಕೆ ತಮ್ಮ ಧರ್ಮ ಸಂಸ್ಕೃತಿಯ ಉಳಿವಿಗಾಗಿ ಹರಿತಂದು ವಾಸಿಸ ತೊಡಗಿದುದಕ್ಕೊಂದು ನಿದರ್ಶನವಾಗಿ ಈ ಪ್ರಾರಾಣ ವಾತನ್ನು ನಾವು ಯೋಚಿಸಬೇಕಾಗಿದೆ. 15-16ನೆ ಶತಮಾನದಲ್ಲಿ ಈ ಗುಮ್ಮಳಾಪುರ ಶರಣಸಂಪ್ರದಾಯದ ಶ್ರೇಷ್ಠ ವ್ಯಕ್ತಿಗಳಿಂದ ಸುಪ್ರಸಿದ್ಧ ವೀರಶೈವ ಕೇಂದ್ರವೇ ಆದುದನ್ನು ನಾವು ಗಮನಿಸಬಹುದು. ತೋಂಟದ ಸಿದ್ಧಲಿಂಗೇಶ್ವರರ ಶಿಷ್ಯರಾಗಿ ಜೋಳಬಸವೇಶ್ವರರನ್ನು ವಿದ್ಯಾಗುರುಗಳನ್ನಾಗಿ ಪಡೆದಿದ್ದ ಗುಮ್ಮಳಾಪುರದ ಸಿದ್ಧಲಿಂಗದೇವರು ಸುಪ್ರಸಿದ್ಧ ಷಟ್‌ಸ್ಥಲಜ್ಞಾನಿಗಳಾಗಿದ್ದರು. ಇವರು ಶೂನ್ಯಸಂಪಾದನೆ ಎಂಬ ಶ್ರೇಷ್ಠ ಮಟ್ಟದ ವೀರಶೈವ ತಾತ್ತ್ವಿಕಗ್ರಂಥ ರಚಿಸಿ ದವರಲ್ಲದೆ, 'ಜೋಳ ಬಸವೇಶ್ವರಾ, ಸಿದ್ಧ ಧರ್ಮ, ಸಿದ್ಧ ಧರ್ಮ, ಎಂಬ ಅಂಕಿತದಲ್ಲಿ ವಚನಗಳನ್ನು ಬರೆದಿದ್ದಾರೆ. ಶಿವಗಣಪ್ರಸಾದಿ ಮಹಾದೇವಯ್ಯ (ಇನ್ನೊಂದು ಶೂನ್ಯಸಂಪಾದನೆಯ ಕರ್ತೃ), ಗೂಳೂರು ಸಿದ್ಧವೀರಣಾರ್ಯ (ಇವರೂ ಮತ್ತೊಂದು ಶೂನ್ಯಸಂಪಾದನೆಯ ಕರ್ತೃ)' ಹಾಗೂ ಗುಮ್ಮಳಾಪುರದ ಸಿದ್ಧಲಿಂಗದೇವ ಇವರು ಮೂವರೂ ಹೆಚ್ಚು ಕಡಿಮೆ ಸಮಕಾಲೀನರಾಗಿ ಬಾಳಿ ಪರಸ್ಪರರನ್ನು ಕಂಡು ಶಿವಾನುಭಾವಗೋಷ್ಠಿಯನ್ನು ನಡೆಸಿ ಮುಂದೆ ಮುಂದಿನವರು ಹಿಂದು ಹಿಂದಿನವರಿಗೆ ಕೃತಜ್ಞತೆಗಳನ್ನರ್ಪಿಸುತ್ತ ಒಡಲು ಹಲವಾದರು ಆತ್ಮ ಒಂದೇ ಆಗಿ ಒಬ್ಬರು ಬರೆದುದನ್ನು ಧಾರಾಳವಾಗಿ ಸ್ವೀಕರಿಸಿ ಶೂನ್ಯ ಸಂಪಾದನೆಯನ್ನು ರಚಿಸಿದ್ದವರು.[10] ಈ ಗುಮ್ಮಳಾಪುರವು 'ಭಸ್ಪನ್ನ ದೇಶದೋಳ್ ಕೈಲಾಸ ವೆನಿಸಿದ್ದಿತೆಂದು ಗುಮ್ಮಳಾಪುರದ ತೋಪಿನ ವೀರಣಾಚಾರಿ ಎಂಬ ಕವಿ (ಕ್ರಿ. ಶ 1650) ಹೇಳಿಕೊಂಡಿದ್ದಾನೆ. ಇವನೂ ಉತ್ತಮ ಕವಿಯಾಗಿದ್ದನು. ಇವನೂ ಅಲ್ಲದೆ ಇಲ್ಲಿ ಶಾಂತೇಶನೆಂಬ ಮಹಾಕವಿಯೂ ಇದ್ದನು. ಈ ಶಾಂತೇಶನನ್ನು ಗುಬ್ಬಿಯ ಶಾಂತೇಶ[11] ಹೊಗಳಿದ್ದಾನೆ. "ಸಿಂಜನಸಂಶ ರತ್ನಾಕರ ಗ್ರಂಥದ ಪ್ರಕಾರ 'ಜೋಳ ಬಸವೇಶ್ವರರ ನಂತರ ಸಿದ್ಧವೀರೇಶ್ವರ ಸ್ವಾಮಿ (ಗುಮ್ಮಳಾಪುರದ ಸಿದ್ಧವೀರೇಶ್ವರ ಸ್ವಾಮಿ') ಎಂಬುವರು ತೋಂಟದ ಸಿದ್ಧಲಿಂಗೇಶ್ವರರ ಸಂಪ್ರದಾಯದ ಶೂನ್ಯ ಸಿಂಹಾಸನಾಧಿಪತಿಗಳಾಗಿದ್ದರೆಂದೂ ಅವರು 98 ವರ್ಷಗಳವರೆಗೆ ಬದುಕಿದ್ದು ಆ ಕಾಲದಲ್ಲಿ ಅಲ್ಲಿ 12000 ಜನರಿಗೆ ವೀರಶೈವೋಪದೇಶ ಕೊಟ್ಟರೆಂದೂ ಅವರ ಗದ್ದುಗೆ ಗುಮ್ಮಳಾಪುರದಲ್ಲೇ ಆಯಿತೆಂದು ತಿಳಿದು ಬರುವುದು.[12] ಇವರೆಲ್ಲರಿಗೆ ಗೂಳೂರು, ಸಿದ್ಧಗಂಗೆ, ಗುಬ್ಬಿ ಹಾಗು ಶಿವಗಂಗೆಗಳ ಸಂಬಂಧ ಒಂದಿಲ್ಲೊಂದು ರೀತಿಯಲ್ಲಿ ಇದ್ದುದು ತಿಳಿದು ಬರುವುದು. ಈ ಎಲ್ಲ ಕಾರಣಗಳಿಂದ ಕಲ್ಯಾಣಕ್ರಾಂತಿಯಾದ ಮೇಲೆ ವಿಜಯನಗರದಲ್ಲಿ ಮತ್ತೊಮ್ಮೆ ವೀರಶೈವೋದ್ಧರಣ ಕಾರ್ಯಗಳು ಅನೇಕ ಮುಖದಲ್ಲಿ ತ್ವರಿತಗತಿಯಿಂದ ಸಾಗುತ್ತಿದ್ದಾಗ ದಕ್ಷಿಣ ಕರ್ನಾಟಕದ ಶಿವಗಂಗಾ—ಸಿದ್ಧಗಂಗಾ ಪರಿಸರದಲ್ಲಿ ಗುಮ್ಮಳಾಪುರ, ಹರದನಹಳ್ಳಿಯ (ಚಾಮರಾಜನಗರ ತಾಲ್ಲೂಕು) ವರೆಗೂ ಹೇಗೆ ಪ್ರಭಾವಯುತವಾಗಿ ನಡೆಯುತ್ತಿತ್ತು ಎಂಬುದನ್ನು ಅರಿಯಬಹುದಾಗಿದೆ. ಈ ಭಾಗದಲ್ಲಿ ಮಠಮಾನ್ಯಗಳು, ಮಹಿಮಾನ್ವಿತವಾದ ಗದ್ದುಗೆಗಳು ಅಧಿಕಸಂಖ್ಯೆಯಲ್ಲಿ ನಮಗೆ ಕಾಣಸುತ್ತಿರುವುದಕ್ಕೆ ಇದು ಒಂದು ಕಾರಣವೆನ್ನಬಹುದು. ಇನ್ನೂ ಒಂದು ಮುಖ್ಯ ಕಾರಣವನ್ನು ಇಲ್ಲಿ ಗಮನಿಸಬೇಕಾಗಿದೆ. ಅತ್ಯಂತ ಪ್ರಭಾವಶಾಲಿಗಳಾಗಿದ್ದ ರೇವಣಸಿದ್ಧೇಶ್ವರರು ಈ ಭಾಗದಲ್ಲಿ

(25 ನೇ ಪುಟ ನೋಡಿ)

10 ಆರ್. ಸಿ. ಹಿರೇಮಠ (ಸಂ) ಗುಮ್ಮಳಾಪುರದ ಸಿದ್ಧಲಿಂಗದೇವರ ಶೂನ್ಯಸಂಪಾದನೆ ಪೀಠಿಕೆ ಪು. 14–15.

11 ವೀರಶೈವ ವಚನಾಮೃತ ಪುರಾಣ ಕರ್ತೃವಾದ ಮಲ್ಲಣಾರ್ಯ (1513) ರ ಮಗನೂ. ಸಿದ್ಧೇಶ್ವರ ಪುರಾಣ ಕರ್ತೃವೂ ಆದ ಶಾಂತೇಶ.

12 ಗುಮ್ಮಳಾಪುರ ಈಗ ಕರ್ನಾಟಕದ ಗಡಿಯಲ್ಲಿರುವ ಮದ್ರಾಸು ಪ್ರಾಂತದ ಹೊಸೂರು ತಾಲೋಕಿನಲ್ಲಿದೆ. ಇಲ್ಲಿಗೂ ಶಿವಗಂಗೆಗೂ ಸುಮಾರು 60 ಮೈಲಿಗಳಿಗಿಂತಲೂ ಹೆಚ್ಚು ದೂರವಾದೀತು. ಆದರೂ ಅದು ಶಿವಗಂಗಾ ಪ್ರಾಂತದ ತೇಜದಿಂದಲೇ ಬೆಳಗಿದುದು.

# ಕನ್ನಡಿಗರ ಬೆಳಗಾವಿ

ಗಂಗಾಧರ ಮಡಿವಾಳೇಶ್ವರ ತುರಮರಿ ಮಂಟಪದಲ್ಲಿ 8-2-1980 ರಂದು ಸಮ್ಮೇಳನಾಧ್ಯಕ್ಷತೆ ವಹಿಸಿದ್ದ ಶ್ರೀ ಬಸವರಾಜ ಕಟ್ಟೀಮನಿಯವರ ಅಧ್ಯಕ್ಷಭಾಷಣದ ಸಾರಾಂಶ.

ಇತಿಹಾಸ, ಪರಂಪರೆ, ಸತ್ಯ, ನ್ಯಾಯಗಳ ದೃಷ್ಟಿಯಿಂದ ಬೆಳಗಾವಿ ಎಂದೆಂದೂ - ಹಿಂದು - ಇಂದು- ಮುಂದೆಯೂ ಸಹ ಕನ್ನಡಿಗರ ನಗರ. ಸೂರ್ಯ ಚಂದ್ರ ರಿರುವವರೆಗೆ, ಮಲಪ್ರಭಾ ಘಟಪ್ರಭಾ ಇರುವವರೆಗೆ, ಕರ್ನಾಟಕ ವಿರುವವರೆಗೆ ಬೆಳಗಾವಿಯೂ ಕನ್ನಡಿಗರ ನಗರವಾಗಿಯೇ ಉಳಿಯುವುದು. ನಮ್ಮದಲ್ಲದುದನು ನಾವುಬಯಸುವವರಲ್ಲ; ನಮ್ಮದಾದುದನ್ನು ಬಿಟ್ಟು ಕೊಡುವವರಲ್ಲ. ಬೆಳಗಾವಿಯು ನಮ್ಮ ಕುಡುಗೋಲಿದ್ದಂತೆ. ಕತ್ತಿಗಿಂತಲೂ ಹರಿತವಾದ ಕುಡಗೋಲು. ಇದನ್ನು ನುಂಗ ಬೇಕೆನ್ನುವವರೇ, ಜೋಕೆ!

**ಕನ್ನಡಿಗರಲ್ಲಿ ಒಕ್ಕಟ್ಟು:**

ಕರ್ನಾಟಕದ ವಿಧಾನ ಮಂಡಲವೂ ಮಂತ್ರಿ ಮಂಡಲವೂ ಈ ಬಗೆಗೆ ಧೀರ ನಿಲುವು ತಳೆದಿವೆ; ಮಹಾಜನ ಆಯೋಗದ ವರದಿಗೇ ಅಂಟಿಕೊಂಡಿವೆ. «ಬೆಳಗಾವಿ ಕರ್ನಾಟಕದ್ದು. ಅದು ಎಂದಿಗೂ ಬೇರೆ ರಾಜ್ಯಕ್ಕೆ ಹೋಗದು" ಎಂದು ನಮ್ಮ ರಾಜ್ಯದ ಮುಖ್ಯ ಮಂತ್ರಿಗಳೂ ಹಲವಾರು ಬಾರಿ ಘೋಷಿಸಿದ್ದಾರೆ. ಆದುದರಿಂದ, ಬೆಳಗಾವಿಯ ಬಗೆಗೆ ಕನ್ನಡಿಗರಿಗೆ ಚಿಂತೆ ಅನವಶ್ಯಕ.

ಆದರೆ, ಜಾತಿ ಮತ ವೈಯಕ್ತಿಕ ಆಸೆ-ಆಕಾಂಕ್ಷೆ ಇತ್ಯಾದಿ ಸಣ್ಣ ವಿಚಾರಗಳನ್ನು ಮರೆತು, ಬೆಳಗಾವಿ ಜಿಲ್ಲೆಯ ಕನ್ನಡಿಗರೆಲ್ಲ ಒಂದಾಗಿ ಸಂಘಟಿತರಾಗಬೇಕಾದದ್ದು ಇಂದಿನ ಸಂದರ್ಭದಲ್ಲಿ ಅಗತ್ಯ. ಮರಾಠಿಗರಲ್ಲಿ ಒಕ್ಕಟ್ಟಿದೆ. ಸಮಿತಿಯ ನೇತೃತ್ವದಲ್ಲಿ ಅವರೆಲ್ಲರೂ ಒಂದುಗೂಡಿದ್ದಾರೆ. ಝಾಲಾಚ ಪಾಹಿಜೆ" ಯ ಪ್ರಶ್ನೆ ಬಂದಾಗ ಅವರು ಜಾತಿಮತಗಳನ್ನೆಲ್ಲ ಕಡೆಗಣಿಸಿ ಒಂದಾಗುತ್ತಾರೆ. ಕನ್ನಡಿಗರು ಮಾತ್ರ ಬ್ರಾಹ್ಮಣ–ಲಿಂಗಾಯತ ಬಣಜಿಗ – ಜಂಗಮ – ಕುರುಬ – ರೆಡ್ಡಿ ಹಾಗು ಇನ್ನಿತರ ಜಾತಿಗಳ ಸಂಕುಚಿತ ಹಿತಾಸಕ್ತಿಗಳನ್ನೇ ಗಮನಿಸುತ್ತಾರೆ. ಕನ್ನಡಕ್ಕೆ ಸಂಬಂಧಪಟ್ಟ ಸಮಸ್ಯೆ ಬಂದಾಗಲೂ ಸಹ ಜಾತೀಯ ಭಾವನೆ ಒಳಗೊಳಗೇ ಕೆಲಸ ಮಾಡುತ್ತದೆ. ಬೆಳಗಾವಿಯಿಂದ ಚುನಾವಣೆಗೆ ನಿಂತ ಕನ್ನಡ ಅಭ್ಯರ್ಥಿಗೆ ಕನ್ನಡಿಗರಲ್ಲಿಯೇ ಕೆಲವು ಜಾತಿಯವರ ಮತ ಸಿಕ್ಕುವುದಿಲ್ಲ. ಆತ ಸೋತುಹೋಗುತ್ತಾನೆ; ನಿರಾಶನಾಗುತ್ತಾನೆ. ಹಣದಾಸೆಯಿಂದಾಗಿ, ಜಾತಿಯ ಮೋಹದಿಂದಾಗಿ ಮರಾಠಿಗರ ಪಕ್ಷ ವಹಿಸುವವರೂ ಇಲ್ಲದಿಲ್ಲ. ಇಂಥವರಿಂದಾಗಿ ಇಲ್ಲಿ ಕನ್ನಡಿಗರ ಶಕ್ತಿ ಕ್ಷೀಣವಾಗಿದೆ. ಮರಾಠಿಗರಲ್ಲಿ ಮಾತ್ರ ಇಂಥ ದ್ರೋಹಿಗಳು ವಿರಳ.

ನಗರಕ್ಕಾಗಿ ನಡೆದಿರುವ ಈ ಕಿಕ್ಕಾಟವೇನೇ ಇದ್ದರೂ ಇಲ್ಲಿನ ಕನ್ನಡಿಗರೂ ಮರಾಠಿಗರೂ ಸೌಹಾರ್ದದಿಂದಲೇ ಬಾಳುತ್ತಿದ್ದಾರೆ. ಕನ್ನಡಿಗರಿಗೆ ಮರಾಠಿಯೂ ಮರಾಠಿಗರಿಗೆ ಕನ್ನಡವೂ ಅರ್ಥವಾಗುತ್ತದೆ. ಮರಾಠಿಗರೂ ಕನ್ನಡ ಮಾತನಾಡುವುದು ಕಡಿಮೆ. ಕನ್ನಡಿಗರಿಗೆ ಮಾತ್ರ ಮರಾಠೀ ಮಾತನಾಡಲು ಬಲು ಹುರುಪು! ಶ್ರೀಮತಿ ಇಂದಿರಾ ಸಂತ, ಎಸ್. ಡಿ. ಇಂಚಲರಂಥ ಕವಿಗಳು, ದಿ ಬಾಬುರಾವ್ ಠಾಕೂರ, ಅಣ್ಣಾ ಗುರೂಜಿ, ಅನಂತರಾವ್ ಚಿಕ್ಕೋಡಿ, ಬ. ಮ ಎಳುಕೋಟಿ ಪರುಳೇ

ಕರಸಂಥ ಹೋರಾಟಗಾರರು, ಪತ್ರಕರ್ತರು, ಈ ನಗರದ ಸಾಂಸ್ಕೃತಿಕ ಜೀವನವನ್ನು ಶ್ರೀಮಂತಗೊಳಿಸಿದ್ದಾರೆ. "ಸ್ವಾಮಿ" ಯಂಥ ಶ್ರೇಷ್ಠ ಕಾದಂಬರಿ ಬರೆದ ಮರಾಠಿಯ ಖ್ಯಾತ ಕಾದಂಬರಿಕಾರ ಶ್ರೀ ರಣಜಿತ ದೇಸಾಯಿಯವರೂ ಬೆಳಗಾವಿಯ ಸಮೀಪದಲ್ಲಿಯೇ ಇರುವರೆಂದು ಕೇಳಿದ್ದೇನೆ.

ಸಾವಿರಾರು ವರ್ಷಗಳ ಹಿಂದೆ ಕರ್ನಾಟಕ ಮಹಾರಾಷ್ಟ್ರಗಳೆರಡೂ ಒಂದೇ ರಾಷ್ಟ್ರವಾಗಿದ್ದುವೆಂಬ ಸತ್ಯಾಂಶವನ್ನು ಇತಿಹಾಸ ಹೇಳುತ್ತದೆ. ಅನಂತರ ಅವೆರಡೂ ಬೇರೆ ಬೇರೆಯಾಗಿ ವಿಶಿಷ್ಟ ವ್ಯಕ್ತಿತ್ವ ಪಡೆದುವು. ಆದರೆ, ನೆರೆಹೊರೆಯ ಸೋದರ ರಾಜ್ಯಗಳಾದುದರಿಂದ ಪರಸ್ಪರ ಪ್ರೀತಿಯಿಂದಲೂ, ಸೌಹಾರ್ದ ದಿಂದಲೂ ವರ್ತಿಸುವುದು ಅವಶ್ಯ.

ಶ್ರೀಮತಿ ದುರ್ಗಾ ಭಾಗವತರು ಕನ್ನಡ-ಮರಾಠೀ ಬಾಂಧವ್ಯದ ಬಗೆಗೆ ಅನೇಕ ಒಳ್ಳೆಯ ಮಾತು ಆಡಿದ್ದಾರೆ. ಭಾರತೀಯ ಸಂಸ್ಕೃತಿ ಮೂಲದಲ್ಲಿ ಒಂದೇ ಭಾಷೆಗಳು ಬೇರೆ ಬೇರೆಯಾಗಿದ್ದರೂ ಅವುಗಳ ಮೂಲ ಸ್ರೋತ್ರದಲ್ಲಿ ಒಂದೇ. ಭಾಷೆಯ ಹೆಸರಿನಲ್ಲಿ ನಾವು ಬಡಿದಾಡ ಬಾರದು. ಪರಸ್ಪರರ ಭಾಷೆಗಳನ್ನು ಕಲಿತು ಪರಸ್ಪರರನ್ನು ಗೌರವಿಸಬೇಕು. ಶ್ರೀಮತಿ ದುರ್ಗಾಭಾಗವತರ ಈ ಸ್ತುತ್ಯ ನಿಲುವಿಗಾಗಿ ನಾನು ಅವರನ್ನು ವಂದಿಸುತ್ತೇನೆ.

ಸಾಹಿತ್ಯಕ–ಸಾಂಸ್ಕೃತಿಕ ಮಟ್ಟದಲ್ಲಿ ಕನ್ನಡ–ಮರಾಠೀ ಬಾಂಧವ್ಯ ಇದ್ದೇ ಇದೆ. ಪುಣೆಯ "ಅಂತರ ಭಾರತೀಯ" ಯವರೂ ಹಲವಾರು ವರ್ಷಗಳಿಂದ ಇದೇ ಕಾರ್ಯದಲ್ಲಿ ತೊಡಗಿದ್ದಾರೆ.

ಕಿತ್ತೂರ ಚೆನ್ನಮ್ಮ, ಬೆಳವಡಿ ಮಲ್ಲಮ್ಮ, ಸಂಗೊಳ್ಳಿ ರಾಯಣ್ಣ, ಟಿಪ್ಪೂಸುಲ್ತಾನರಂಥ ನಾವು ಸ್ವಾತಂತ್ರ್ಯ [illegible] ಶಿವಾಜಿ ಮಹಾರಾಜ, ತಾನಾಜಿ [illegible] ಲಕ್ಷ್ಮೀಬಾಯಿ, ತಾರಾಬಾಯಿಯವರಂಥ [illegible] ಹೊಗಳುವನ್ನು ಎಮು [illegible] ಮಹಾರಾಜ [illegible] [illegible] ನಮ್ಮ ಕಿತ್ತೂರ ವೀರ ರಾಣಿ ಚೆನ್ನಮ್ಮ.

## ಕರ್ನಾಟಕದಲ್ಲಿ ಮರಾಠಿಗರು

ಆದರೆ, ಅದೇ ತಾರಾರಾಣಿಯ ರಾಜಧಾನಿ ಕೊಲ್ಹಾಪುರದಲ್ಲಿ ಕೆಲವರ್ಷಗಳ ಹಿಂದೆ ಕನ್ನಡಿಗರ ವಿರುದ್ಧ ದೊಂಬಿಯಾದದ್ದೂ, ದುಡಿದು ತಿನ್ನುವ ಕನ್ನಡ ಶ್ರಮ ಜೀವಿಗಳನ್ನು ಒಡೆದು ಓಡಿಸಲಾದದ್ದೂ ದುಃಖದ ವಿಚಾರವಲ್ಲವೆ? ಕರ್ನಾಟಕದ ನಗರಗಳಲ್ಲಿ ಲಕ್ಷಾಂತರ ಮರಾಠಿಗರು ನೆಲಸಿದ್ದಾರೆ. "ಕಿರ್ಲೋಸ್ಕರ್" ದಂಥ ದೊಡ್ಡ ಸಂಸ್ಥೆ ಬೆಂಗಳೂರು, ಹರಿಹರ, ಹುಬ್ಬಳ್ಳಿಗಳಲ್ಲಿ ಕಾರಖಾನೆಗಳನ್ನು ಸ್ಥಾಪಿಸಿದೆ. ಸಾವಿರಾರು ಮರಾಠಿಗರು ಅಲ್ಲಿ ಕೆಲಸ ಮಾಡುತ್ತಿದ್ದಾರೆ. ಧಾರವಾಡದ ಸುಭಾಷ ರಸ್ತೆಯಲ್ಲಿ ಹಲವು ಅಂಗಡಿಗಳು ಮರಾಠಿಗರವು. ಹುಬ್ಬಳ್ಳಿ–ಗದಗ-ಹರಿಹರ–ದಾವಣಗೆರೆ–ರಾಣೆಬೆನ್ನೂರು–ಹಾವೇರಿ–ಬೆಂಗಳೂರುಗಳಲ್ಲು ಮರಾಠಿಗರು ವ್ಯಾಪಾರ–ವ್ಯವಹಾರ–ನೌಕರಿ ಮಾಡಿಕೊಂಡು ಹಾಯಾಗಿದ್ದಾರೆ. ಅವರು ಕನ್ನಡ ಕಲಿತು ಕನ್ನಡಿಗರೊಡನೆ ಬೆರೆತಿದ್ದಾರೆ. ಅವರು ಮರಾಠಿಗರೆಂಬ ಕಾರಣಕ್ಕಾಗಿ ಕರ್ನಾಟಕದಲ್ಲಿ ಅವರಿಗೆ ಯಾವ ತೊಂದರೆಯೂ ಇಲ್ಲ. ಕೊಲ್ಹಾಪುರ ಬೆಳಗಾವಿಗಳಲ್ಲಿ ಕನ್ನಡಿಗರ ಮೇಲೆ ದಾಳಿ ನಡೆದಾಗ ಮಾತ್ರ ಧಾರವಾಡದ ಕೆಲವು ಕಿಡಿಗೇಡಿಗಳು ಅಲ್ಲಿಯ ಮರಾಠೀ ಮಂಡಲಿಯ ಕಟ್ಟಡಕ್ಕೆ ಬೆಂಕಿ ಹಚ್ಚಿದ್ದರು. ಇಂಥ ಹಿಂಸಾಕೃತ್ಯಗಳನ್ನು ಕನ್ನಡಿಗರು ಸಹಿಸುವುದಿಲ್ಲ. ಈಚೆಗೆ ಆ ಮರಾಠೀ ಮಂಡಲಿಯ ನೂತನ ಕಟ್ಟಡ ಎದ್ದುನಿಂತಿದೆ. ನಮ್ಮ ಅಂದಿನ ಮುಖ್ಯಮಂತ್ರಿಗಳೇ ಅದರ ಅಡಿಗಲ್ಲು ಇರಿಸಿದರಲ್ಲದೆ, ಸರಕಾರದಿಂದ ಸಾಕಷ್ಟು ಹಣವನ್ನೂ ಸಲ್ಲಿಸಿದ್ದಾರೆ. ಕರ್ನಾಟಕದಲ್ಲಿ ಮರಾಠಿಯ ವ್ಯಾಸಂಗಕ್ಕೆ ಯಾವ ವಿಧವಾದ ತೊಂದರೆಯೂ ಇಲ್ಲ. ಕೆಲವು ಜನ ಮರಾಠೀ ಪತ್ರಕರ್ತರಿಗೂ ಸಹ ನಮ್ಮ ಸರಕಾರದವರು ಮಾಸಿಕ ಗೌರವಧನ ಸಲ್ಲಿಸುತ್ತಿದ್ದಾರೆ!

ಪುಣೆ–ಮುಂಬಯಿಗಳಲ್ಲಿ ಕರ್ನಾಟಕ ಸಂಘಗಳಿವೆ. ಮುಂಬಯಿಯಲ್ಲಿ ಲಕ್ಷಾಂತರ ಕನ್ನಡಿಗರಿದ್ದಾರೆ. ಆದರೆ ಅವರು ಮರಾಠೀ ಕಲಿತು ಅಲ್ಲಿಯ ಜನರೊಡನೆ [illegible]ದ್ದಾರೆ. ನಾವು ಯಾವುದೇ ರಾಜ್ಯದಲ್ಲಿದ್ದರೂ ಅಲ್ಲಿಯ ಪ್ರಾದೇಶಿಕ ಭಾಷೆಯನ್ನು ಕಲಿಯಬೇಕಾಗುತ್ತದೆ. ಮದ್ರಾಸಿನಲ್ಲಿ ನೆಲಸಿದ ಪರರಾಜ್ಯಗಳ ಜನರು

ತಮಿಳು ಕಲಿಯದಿದ್ದರೆ ಫಜೀತಿಪಟ್ಟುಕೊಂಡು ಹಿಂತಿರುಗಿ ಬರಬೇಕಾಗುತ್ತದೆ. ಆದರೆ, ಅಂಥ ಉಗ್ರ ಭಾಷಾಭಿಮಾನ ಕರ್ನಾಟಕದಲ್ಲಿಲ್ಲ. ಬೆಳಗಾವಿಯಲ್ಲಿರುವ ಮರಾಠೀ ಬಾಂಧವರೆಲ್ಲರೂ ಕನ್ನಡ ಕಲಿತುಕೊಂಡು ಕನ್ನಡಿಗರೊಡನೆ ಪ್ರೀತಿಯಿಂದ ವರ್ತಿಸುವರೆಂದು ಆಶಿಸುತ್ತೇನೆ.

**ಕಾಸರಗೋಡು—ಕನ್ನಡನಾಡು :**

ಕರ್ನಾಟಕಕ್ಕೆ ಸೇರಿಕೊಳ್ಳಬೇಕಾದ ಕಾಸರಗೋಡು ಕಳೆದ ೨೩ ವರ್ಷಗಳಿಂದ ಕೇರಳದಲ್ಲಿ ಉಳಿದುಕೊಂಡಿರುವುದು ದುಃಖದ ವಿಚಾರ. ನಮ್ಮ ಹಿರಿಯ ಕವಿ ಗೋವಿಂದ ಪೈಗಳೂ, ಶಾಸಕರೂ ಹೋರಾಟಗಾರರೂ ಆಗಿದ್ದ ಮಹಾಬಲಭಂಡಾರಿಯವರೂ ಇದಕ್ಕಾಗಿ ದುಃಖಿಸುತ್ತಲೇ ತೀರಿಕೊಂಡರು. ಕ್ರಾಂತಿಕವಿ ಕಯ್ಯಾರಕಿಞ್ಞಣ್ಣರೈಯವರೂ ಅವರ ಸಂಗಡಿಗರೂ ಕಾಸರಗೋಡನ್ನು ಕರ್ನಾಟಕಕ್ಕೆ ಸೇರಿಸಲು ಹಟಹಿಡಿದು ದುಡಿಯುತ್ತಿದ್ದಾರೆ. ನಮ್ಮ ಸರಕಾರವೇನೋ ಅದಕ್ಕೆ ತಯಾರಾಗಿಯೇ ಇವೆ. ಕೇರಳ ಸರಕಾರ ಒಪ್ಪಿಕೊಳ್ಳಬೇಕು. ಕೇಂದ್ರ ಸರಕಾರ ಮನಸ್ಸುಮಾಡಿದರೆ ಈ ಸಮಸ್ಯೆ ಸುಲಭವಾಗಿ ಪರಿಹಾರವಾಗುವುದು. ಕರ್ನಾಟಕದ ಸಂಸತ್ ಸದಸ್ಯರು ಕಾಸರ ಗೋಡಿನ ಬಗೆಗೆ ಕೇಂದ್ರ ಸರಕಾರದ ಮೇಲೆ ಒತ್ತಡ ತರಬೇಕೆಂದು ಅವರನ್ನು ಕೇಳಿಕೊಳ್ಳುತ್ತೇನೆ ಸೊಲ್ಲಾಪುರ, ಅಕ್ಕಲ ಕೋಟ, ಜತ್ತ, ತಾಳವಾಡಿ ಮೊದಲಾದ ನಮ್ಮ ಪ್ರದೇಶಗಳನ್ನು ಪಡೆಯಲು ನಮ್ಮ ಸಂಸತ್‌ಸಧಸ್ಯರು ಪ್ರಯತ್ನಿಸಬೇಕು. ಮಹಾಜನ ವರದಿ ಕೂಡಲೇ ಜಾರಿಗೆ ಬರಬೇಕೆಂದು ನಾವೆಲ್ಲರೂ ಆಗ್ರಹಪಡಿಸಬೇಕು. "ಮಹಾಜನ ವರದಿ ಮರಾಠಿಗರಿಗೆ ಬೇಡವಾದರೆ ನಮಗೂ ಬೇಡ" ಎಂದು ಯಾರು ಹೇಳಬಾರದು. ಆ ವರದಿ ಜಾರಿಗೆ ಬಂದರೆ 'ನಮ್ಮ ಕಾಸರಗೋಡು ನಮಗೆ ಬರುತ್ತದೆ.'

**ರಾಜ್ಯಭಾಷೆ ಕನ್ನಡ :**

೧೯೭೮ ರ ನವಂಬರ್ ೧ ರೊಳಗಾಗಿ ಕನ್ನಡವು ಈ ರಾಜ್ಯದ ಆಡಳಿತ ಭಾಷೆಯಾಗಲೇಬೇಕೆಂದು ಧರ್ಮಸ್ಥಳದಲ್ಲಿ, ಪರಿಷತ್ತಿನ ಅಧ್ಯಕ್ಷ ಶ್ರೀ ಹಂಪ, ನಾಗರಾಜಯ್ಯನವರು ಘೋಷಿಸಿದ್ದರು. ಸಮಸ್ತ ಕನ್ನಡಿಗರ ಈ ಕೋರಿಕೆಗೆ ಮನ್ನಣೆಯಿತ್ತು ನಮ್ಮ ಸರಕಾರದವರು ಕಳೆದ ನವಂಬರ್ ೧ ರಿಂದಲೇ ಕನ್ನಡವನ್ನು ರಾಜ್ಯಭಾಷೆಯ ಪೀಠಕ್ಕೇರಿಸಿದ್ದಾರೆ. ಕನ್ನಡಿಗರ ಅನೇಕ ವರ್ಷಗಳ ಈ ಕೋರಿಕೆಯನ್ನು ಈಡೇರಿಸಿಕೊಟ್ಟುದುದಕ್ಕಾಗಿ ನಮ್ಮ ಸರಕಾರಕ್ಕೆ ಹೃತ್ಪೂರ್ವಕ ವಂದನೆಗಳು.

ನಮ್ಮ ಮಂತ್ರಿಮಂಡಲದ ಸಭೆಗಳೂ ಸಹ ಕನ್ನಡದಲ್ಲಿಯೇ ಕಾರ್ಯಕಲಾಪ ನಡೆಸುತ್ತಿವೆ. ಸರಕಾರದ ಮುಖ್ಯಕಾರ್ಯದರ್ಶಿಗಳಾದಿಯಾಗಿ ಎಲ್ಲ ಅಧಿಕಾರಿಗಳೂ ಕನ್ನಡದಲ್ಲಿಯೇ ವ್ಯವಹರಿಸುತ್ತಿದ್ದಾರೆ.

ವ್ಯಾವಹಾರಿಕವಾಗಿ ಕನ್ನಡವು ಆಡಳಿತ ಭಾಷೆಯಾಗುವಲ್ಲಿ ಕನ್ನಡ ಬೆರಳಚ್ಚು ಯಂತ್ರಗಳ ಕೊರತೆ ಮುಖ್ಯ ಕಾರಣ. ಇನ್ನುಮುಂದೆ ಸರಕಾರೀ ಕಚೇರಿಗಳಿಗೆ ಇಂಗ್ಲಿಷ್ ಬೆರಳಚ್ಚು ಯಂತ್ರಗಳ ಬದಲು ಕನ್ನಡ ಯಂತ್ರಗಳನ್ನೇ ಪೂರೈಸಲು ಸರಕಾರ ನಿರ್ಧರಿಸಿದೆ. ಇಂಗ್ಲಿಷ್ ಬೆರಳಚ್ಚುಗರು ಕನ್ನಡ ಬೆರಳಚ್ಚು ಕಲಿಯುವುದು ತೀರಾ ಸುಲಭ. ಅಲ್ಲದೆ, ಸಾವಿರಾರು ಮಂದಿ ಕನ್ನಡ ಬೆರಳಚ್ಚುಗರು ಕೆಲಸವಿಲ್ಲದೆ ನಿರುದ್ಯೋಗಿಗಳಾಗಿ ಅಲೆಯುತ್ತಿದ್ದಾರೆ. ಕಚೇರಿಗಳಿಗೆ ಕನ್ನಡ ಬೆರಳಚ್ಚು ಯಂತ್ರಗಳನ್ನೊದಗಿಸಿ ಕನ್ನಡ ಬೆರಳಚ್ಚು ಕಲಿತ ಅರ್ಹರನ್ನು ಕೆಲಸಕ್ಕೆ ಸೇರಿಸಿಕೊಂಡರೆ ಈ ಸಮಸ್ಯೆಗೆ ಪರಿಹಾರ ಲಭಿಸುತ್ತದೆ.

ಆದರೆ, ಕನ್ನಡ ಬೆರಳಚ್ಚು ಕಲಿಯಲು ಸರಕಾರೀ ನೌಕರರಿಗೆ ತರಬೇತಿ ನೀಡುವುದಕ್ಕಾಗಿ ೭೫,೨೦೦ ರೂ. ಗಳನ್ನು ಕನ್ನಡ ಬೆರಳಚ್ಚು ಮತ್ತು ಶೀಘ್ರಲಿಪಿ ಪರೀಕ್ಷೆಗಳಿಗೆ ಕಟ್ಟುವವರಿಗೆ ೮೦,೦೦೦ರೂಗಳನ್ನು ಖರ್ಚು ಮಾಡುವುದಕ್ಕಾಗಿ ಸರಕಾರದ ಕನ್ನಡ ಮತ್ತು ಸಂಸ್ಕೃತ ಇಲಾಖೆ ಘೋಷಿಸಿದೆ.

ಈ ಖರ್ಚು ಅನವಶ್ಯಕವೆಂದೇ ನನ್ನ ಸ್ಪಷ್ಟ ಅಭಿಪ್ರಾಯ. ನೌಕರಿ ಬೇಕಿದ್ದವರು ಕನ್ನಡ ಶೀಘ್ರಲಿಪಿಯನ್ನೂ ಬೆರಳಚ್ಚನ್ನೂ ಕಲಿತೇಕಲಿಯುತ್ತಾರೆ. ಅವರಿಗೆ ಈ ರೀತಿಯಾಗಿ ಹಣ ಸುರಿಯಬೇಕಾಗಿಲ್ಲ.

ಪಿ.ಯು.ಸಿ. ತರಗತಿಗಳಲ್ಲಿಯೇ ಈ ಶಿಕ್ಷಣ ಕೊಡಬಹುದಾಗಿದೆ. ಈ ಪರೀಕ್ಷೆ ಮುಗಿಸಿ ಹೊರ ಬಂದವರು ನೌಕರಿ ಪಡೆಯಬಹುದು.

**ಕನ್ನಡದ ಉದ್ಧಾರ !**

ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇನ್ನೂ ಹಲವು ವಿಭಾಗಗಳಲ್ಲಿ ಹಣ ಪೋಲು ಮಾಡುತ್ತಿದೆ.

ತಮ್ಮ ನಿತ್ಯದ ವ್ಯವಹಾರದಲ್ಲಿ ಕನ್ನಡ ಬಳಸುವ ಅಧಿಕಾರಿಗಳಿಗೂ ನ್ಯಾಯಾಧೀಶರಿಗೂ ವಕೀಲರಿಗೂ ಪ್ರೋತ್ಸಾಹ ನೀಡಲು ೬೧,೦೦೦ರೂ. ಬಹುಮಾನಗಳನ್ನು ಹಂಚುತ್ತಿದೆ.

ಕನ್ನಡ ರಾಜ್ಯದಲ್ಲಿ ಕನ್ನಡದಲ್ಲೇಯೆ ವ್ಯವಹರಿಸಬೇಕಾದುದು ಈ ಅಧಿಕಾರಿಗಳ ಆದ್ಯ ಕರ್ತವ್ಯವಲ್ಲವೆ? ಅದಕ್ಕಾಗಿ ಅವರು ಸಂಬಳವನ್ನು ಪಡೆಯುತ್ತಿರುವಾಗ ಮತ್ತೆ ಈ 'ಪ್ರೋತ್ಸಾಹಕರ ಬಹುಮಾನಗಳ ಅಗತ್ಯವಾದರೂ ಏನಿದೆ.? ಕನ್ನಡದ ಅಭಿವೃದ್ಧಿಗಾಗಿ ಸರಕಾರ ವಿೂಸಲಾಗಿಡುವ ಹಣವನ್ನು ಈ ರೀತಿಯಾಗಿ ಅಧಿಕಾರಿಗಳೇ ನುಂಗುತ್ತಿರುವುದನ್ನು ನಮ್ಮ ಮುಖ್ಯಮಂತ್ರಿಯವರು ದಯವಿಟ್ಟು ಗಮನಿಸ ಬೇಕು. ಈ ಇಲಾಖೆಯ ಹುಚ್ಚು ಚ್ಚಾರಕ್ಕೆ ಬರೆ ಹಾಕಬೇಕು.

ರಾಜ್ಯದಲ್ಲಿ ಸಂಸ್ಕೃತಿ ಇಲಾಖೆ ಪ್ರಾರಂಭಿಸಿದ ಕೀರ್ತಿ; ಕನ್ನಡದ ಕಟ್ಟಾಭಿಮಾನಿ ಶ್ರೀ ಕೆಂಗಲ್ ಹನುಮಂತಯ್ಯನವರಿಗೆ ಸಲ್ಲುತ್ತದೆ. ಅವರ ತರುವಾಯ ಬಂದ ಮುಖ್ಯಮಂತ್ರಿಗಳು ಸಹ ಈ ಇಲಾಖೆಯನ್ನು ಬಲಪಡಿಸುತ್ತಲೇ ಬಂದಿದ್ದಾರೆ. ಕನ್ನಡದ ಅಭಿವೃದ್ಧಿ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳೆಲ್ಲವನ್ನು ಒಂದೆಡೆ ಸೇರಿಸಿ ವ್ಯವಸ್ಥೆಗೊಳಿಸಲು ಇದೀಗ ಈ "ಕನ್ನಡ ಮತ್ತು ಸಂಸ್ಕೃತಿ ಇಲಾಖೆ ರೂಪು" ಗೊಂಡಿರುವಂತೆ ತೋರುತ್ತದೆ. ಪ್ರತಿಯೊಂದು ಜಿಲ್ಲಾ ಸ್ಥಳದಲ್ಲೂ ಈ ಇಲಾಖೆಯ ಅಧಿಕಾರಿಗಳಿರುವರೆಂದು ಹೇಳಲಾಗಿದೆ. ಸಾರ್ವಜನಿಕರಿಗೆ ಮಾತ್ರ ಇವರ ದರ್ಶನವೂ ಅಲಭ್ಯ. ಇವರು ಮಾಡುತ್ತಿರುವ ಕೆಲಸವೇನೆಂಬುದೂ ತಿಳಿಯದು. ಕನ್ನಡಕ್ಕಾಗಿ ಸರಕಾರ ಕೊಡುವ ಹಣದಲ್ಲಿ ಬಹುಭಾಗ ಈ ಇಲಾಖೆಯ ನೌಕರರಸಂಬಳ-ಗಿಂಬಳಗಳಿಗೂ ಅಧಿಕಾರಿ ಬಹುಮಾನಗಳಿಗೂ ವ್ಯಯವಾಗಿ ಹೋಗುತ್ತಿದೆ. ಇಂಥ ಲೂಟಿ ಬೇರಾವ ರಾಜ್ಯದಲ್ಲೂ ನಡೆಯುತ್ತಿಲ್ಲ.

**ಹಿಂದಿಯ ದಬ್ಬಾಳಿಕೆ :**

ಕನ್ನಡವನ್ನೂ ಇನ್ನಿತರ ದ್ರಾವಿಡ ಭಾಷೆಗಳನ್ನೂ ತುಳಿದು, ಹತ್ತಿಕ್ಕಿ ಅಪಮಾನಗೊಳಿಸುತ್ತಿರುವ ಹಿಂದೀ ಸಾಮ್ರಾಜ್ಯವಾದಿಗಳನ್ನು ನಾವು ಖಂಡಿಸಲೇ ಬೇಕಾಗುತ್ತದೆ.

ಭಾರತವೆಲ್ಲ ಒಂದು, ಭಾರತೀಯರೆಲ್ಲರೂ ಸೋದರರು—ಎಂಬುದೇನೋ ನಿಜ. ಆದರೆ, ಒಬ್ಬ ಸೋದರರ ಇನ್ನಿತರ ಸೋದರರ ಮೇಲೆ ದಬ್ಬಾಳಿಗೆ ನಡೆಸತೊಡಗಿದರೆ ಅದನ್ನು ಸಹಿಸಿಕೊಂಡು ಸುಮ್ಮನಿರುವುದು ಹೇಡಿತನವಾದೀತು. ಹಿಂದಿಯು ರಾಷ್ಟ್ರ ಭಾಷೆಯಾಗಿದೆ ಯೆಂದೇ ನಂಬಿಕೊಂಡು, ಅದನ್ನು ಭಾರತೀಯರೆಲ್ಲರ ಮೇಲೂ ಒತ್ತಾಯದಿಂದ ಹೇರುತ್ತಿದ್ದಾರೆ; ಹಿಂದೀ ಭಾಷಾಂಧರು. ಅಂಚೆ-ತಂತಿ ಇಲಾಖೆ, ರೈಲ್ವೆ ಇಲಾಖೆಗಳ ಕಾಗದಪತ್ರಗಳ ಮೇಲೆ ಬ್ರಿಟೀಷರ ಕಾಲದಲ್ಲೂ ಇರುತ್ತಿದ್ದ ಕನ್ನಡ ಭಾಷೆ ಈಚೆಗೆ ಮಾಯವಾಗಿ ಅದರ ಸ್ಥಾನವನ್ನು ಹಿಂದೀ ಅಕ್ರಮಿಸಿದೆ. ರಾಷ್ಟ್ರೀಕೃತ ಬ್ಯಾಂಕುಗಳ ಕ್ಯಾಲೆಂಡರುಗಳ ಮೇಲೆ, ನಮೂನೆಪತ್ರಗಳ ಮೇಲೆ, ನಾಮಫಲಕಗಳ ಮೇಲೆ, ಚೆಕ್ಕುಗಳ ಮೇಲೆ ಕಾರುಗಳ ಮೇಲೂ ಸಹ ಹಿಂದೀ ರಾರಾಜಿಸುತ್ತಿದೆ. ಕನ್ನಡಿಗರ ಹಣದಿಂದ ಕೊಬ್ಬಿ ಬೆಳೆಯುವ ಈ ಬ್ಯಾಂಕುಗಳು ಕನ್ನಡಕ್ಕೇ ಸ್ಥಾನ ಕೊಡುವುದಿಲ್ಲವೆಂದರೆ ಉದ್ಧಟತನದ, ಕೃತಘ್ನತೆಯ ನಿದರ್ಶನವಲ್ಲವೆ ? ಸ್ವಾಭಿಮಾನ ಧನರಾದ ಕನ್ನಡಿಗರು ಈ ಅನ್ಯಾಯದ ವಿರುದ್ಧ ಧ್ವನಿಯೆತ್ತುತ್ತಿಲ್ಲವೇಕೆ ? ಕನ್ನಡ ತೀರ ತುಚ್ಛವಸ್ತುವಾಯಿತಲ್ಲ ಈ ಹಿಂದೀ ಮದಾಂಧರ ದೃಷ್ಟಿಯಲ್ಲಿ ? ನಮ್ಮ ಸಂಸತ್ ಸದಸ್ಯರು ಸಂಸತ್ತಿನಲ್ಲಿ ಈ ಹಿಂದೀ ಅತ್ಯಾಚಾರಿಗಳನ್ನು ಖಂಡಿಸಬೇಕು. ನಮ್ಮ ಹತ್ತು ಜನ ಸಂಸತ್ ಸದಸ್ಯರು ಪ್ರತಿಭಟಿಸಿದರೆ ಸಾಕು. ಹಿಂದೀ ದಬ್ಬಾಳಿಕೆಗಾರರು ಬಾಲಮುದುರಿಕೊಂಡು ಓಡುತ್ತಾರೆ.

ನನಗೆ ಹಿಂದಿಯ ಬಗೆಗೆ ದ್ವೇಷವಿಲ್ಲ; ಯಾವುದೇ ಭಾಷೆಯ ಬಗೆಗೂ ದ್ವೇಷವಿಲ್ಲ. ಹಿಂದೀ ಸಹ ಭಾರತೀಯ ಭಾಷೆಯೇ. ಆದರೆ, ಕನ್ನಡ-ತಮಿಳು-ತೆಲುಗು ಮಲೆಯಾಳೀ-ಮರಾಠೀ ಕಾವ್ಯ-ಸಾಹಿತ್ಯಗಳ ಶ್ರೀಮಂತಿಕೆ ಹಿಂದಿಗೆ ಇಲ್ಲ. ೧೦ನೆಯ ಶತಮಾನದಲ್ಲಿಯೇ ಪಂಪನಂಥ ಮಹಾಕವಿಯನ್ನು ಕೊಟ್ಟ ಕನ್ನಡವೆಲ್ಲಿ ? ಹದಿನಾಲ್ಕನೆಯ ಶತಮಾನದಲ್ಲಿ ಕಣ್ಣು ಬಿಡತೊಡಗಿದ ಹಿಂದಿ ಎಲ್ಲಿ ? " ಶ್ರೀ ರಾಮಾಯಣದರ್ಶನಂ " ದಂಥ ಮಹಾಕಾವ್ಯವಾಗಲಿ, " ಮಲೆಗಳಲ್ಲಿ ಮದುಮಗಳು " ದಂಥ ಮಹಾ

25 ನೇ ಪುಟ ನೋಡಿ

# ಮಾ ತಾ ಹ ರಿ

—ಪ. ರಾಮಕೃಷ್ಣ ಶಾಸ್ತ್ರಿ

ಈ ಶತಮಾನದ ಅತಿ ಭಯಂಕರ ಗೂಢಚಾರಿಣಿಯೆಂಬ ಆರೋಪ ಹೊರಿಸಿ 1917 ಅಕ್ಟೋಬರ 15 ರ ಒಂದು ಮುಂಜಾನೆ ವಿನ್‌ಸೆನೆಸ್ ಜೈಲಿನ ಆವರಣದಲ್ಲಿ (ಫ್ರೆಂಚ್ ಮಿಲಿಟರಿ ನ್ಯಾಯಾಲಯವು ವಿಧಿಸಿದ ಶಿಕ್ಷೆಯಂತೆ) ಫ್ರೆಂಚ್ ಸೈನಿಕರು ಮಾತಾಹರಿಯನ್ನು ಗುಂಡಿಕ್ಕಿ ಕೊಂದರು. ಅವಳ ವಯಸ್ಸು ಆಗ ನಲುವತ್ತು. ಎತ್ತರ ನಿಲುವಿನ, ಹೇಗೆಂದರೆ ಹಾಗೆ ಬಳುಕುವ ಮೈಕಟ್ಟಿನ ಅವಳು ನಿಜವಾಗಿಯೂ ಅಪರಾಧಿ ಹೌದೋ ಅಲ್ಲವೋ ಎನ್ನುವ ಕುರಿತು ಇತಿಹಾಸಜ್ಞರು ವಾದಿಸುತ್ತಲೇ ಇದ್ದಾರೆ. ಮಾತಾಹರಿ ತನ್ನ ಅಂತಿಮ ಸಂದೇಶದಲ್ಲಿ ತಾನು ನಿರಪರಾಧಿ, ತನ್ನ ಕೊಲೆ ನಡೆಯುತ್ತಿರುವುದು ನ್ಯಾಯವಲ್ಲವೆಂದು ಸಾರಿ ಹೇಳಿದ್ದಳು.

1905 ರಲ್ಲಿ ಪ್ರಪ್ರಥಮವಾಗಿ ಪ್ಯಾರಿಸಿನಲ್ಲಿ ಭಾರತದ ಹೆಸರಾಂತ ನರ್ತಕಿಯೆಂದು ಜನರನ್ನು ಆಕರ್ಷಿಸಿದ ಮಾತಾಹರಿ ಸುಂದರಿಯಾಗಿರಲಿಲ್ಲ. ಅಂಥ ನೃತ್ಯ ನಿಪುಣೆಯುಲ್ಲದಿದ್ದರೂ ಅವಳು ಪೂರ್ಣ ಬೆತ್ತಲೆಯಾಗಿ ನರ್ತಿಸುತ್ತಿದ್ದಳು. ಆ ಕಾಲದ ಅನೇಕ ಮಹಾವ್ಯಕ್ತಿಗಳನ್ನು ಬಲೆಗೆ ಹಾಕಿಕೊಂಡಿದ್ದ ಅವಳ ಚರಿತ್ರೆ ಬಲು ವಿಲಕ್ಷಣವಾಗಿತ್ತು.

ಯಾರಾದರೂ ಮಾತಾಹರಿಯ ಪರಿಚಯ ಕೇಳಿದರೆ, "ನಾನು ದಕ್ಷಿಣ ಭಾರತದ ಮಲಬಾರಿನವಳು ಪವಿತ್ರ ಕ್ಷೇತ್ರವಾದ ಜಾಫನಾಪುರದಲ್ಲಿ ಬ್ರಾಹ್ಮಣ ಕುಲದಲ್ಲಿ ಹುಟ್ಟಿದ್ದವಳು. ನನ್ನ ತಂದೆ ಆಶೀರ್ವಾದಂ, ತಾಯಿ ಕಂದಸ್ವಾಮಿ ಮಂದಿರದ ನೃತ್ಯಗಾತಿ. ಹುಟ್ಟಿದೊಡನೆಯೆ ತಾಯಿಯನ್ನು ಕಳೆದುಕೊಂಡ ನನ್ನನ್ನು ದೇವಾಲಯದ ಪೂಜಾರಿಗಳು ಸಾಕಿ 'ಮಾತಾಹರಿ'(ಉಷಾನೇತ್ರೆ) ಎಂದು ಹೆಸರಿಟ್ಟರು. ಅವರ ತರಬೇತಿಯಿಂದ ನಾನು ದೇವಾಲಯದ ನರ್ತಕಿಯಾಗಿ ಕಠೋರ ಸಾಧನೆ ಮಾಡಿದೆ. 13ನೆಯ ವಯಸ್ಸಿನಲ್ಲಿ ಒಂದು ವಸಂತೋದಯದ ಶಕ್ತಿ ಪೂಜೆಯಂದು ಕಂದಸ್ವಾಮಿ ದೇವಾಲಯದ ರಂಗ ಮಂಟಪದಲ್ಲಿ ಮೊದಲ ಬಾರಿ ನಗ್ನಳಾಗಿ ನರ್ತಿಸಿದೆ. ಅಲ್ಲಿ ನನ್ನ ನೃತ್ಯವನ್ನು ನೋಡಿ ಒಬ್ಬ ಆಂಗ್ಲ ತರುಣ ಮೋಹಿಸಿದ. ಪೂಜಾರಿಗಳ ಭೋಗ ಸಾಮಗ್ರಿಯಾಗಲಿದ್ದ ನನ್ನನ್ನು ಅವನು ಮದುವೆಯಾದ. ನನಗೊಂದು ಗಂಡುಮಗು ಜನಿಸಿತು. ಆ ಮಗುವನ್ನು ಕೆಲಸದವಳು ವಿಷ ಹಾಕಿ ಕೊಂದಳು. ನನ್ನ ಗಂಡ ಜ್ವರದಿಂದ ಸತ್ತ. ಅಪವಿತ್ರೆಯಾದ ನಾನು ಮತ್ತೆ ದೇವಾಲಯ ಸೇರುವಂತಿರಲಿಲ್ಲ. ಆದ್ದರಿಂದ ಭಾರತೀಯ ನೃತ್ಯ ರಹಸ್ಯಗಳನ್ನು ಯುರೋಪಿನಲ್ಲಿ ಪ್ರಸಾರಗೊಳಿಸಲು ಬದ್ಧ ಕಂಕಣಳಾದೆ".

—ಹೀಗೆ ಮಾತಾಹರಿ ಮನೋಹರವಾದ ಕಥೆ ಹೇಳುತ್ತಿದ್ದರೂ ಅದರಲ್ಲಿ ಸ್ವಲ್ಪವೂ ಸತ್ಯಾಂಶವಿರಲಿಲ್ಲ. ಕಂದಸ್ವಾಮಿ ದೇವಾಲಯವಿದ್ದುದು ಭಾರತದಲ್ಲಿ ಅಲ್ಲ, ಸಿಲೋನಿನಲ್ಲಿ. ಮಾತಾಹರಿ ಎಂಬ ಹೆಸರು ಮಲಯಾ ಭಾಷೆಯದು. ಬುದ್ಧನ ಬಂಗಾರದ ವಿಗ್ರಹವನ್ನು ಹಿನ್ನೆಲೆಯಲ್ಲಿರಿಸಿ, ಕಾಲ ರುದ್ರನ ವಿಗ್ರಹದ ಎದುರು ಆಕೆ ಮಾಡುತ್ತಿದ್ದ ನೃತ್ಯ ಇಂಡೋನೇಷಿಯನ್ ಶೈಲಿಯದ್ದು. ಆದರೆ ಅವಳ ನೃತ್ಯದ ರೀತಿಯೇ ಅಮೋಘವಿತ್ತು. ಶರೀರದಲ್ಲಿ ಎಲುಬೇ ಇಲ್ಲವೇನೋ ಎಂಬಂತೆ ಅಂಗಚಾಪಲ್ಯ ಪ್ರದರ್ಶಿಸುತ್ತಿದ್ದಳು.

ಮಾತಾಹರಿಯ ನಿಜವೃತ್ತಾಂತ ಮಾತ್ರ ಪ್ರತ್ಯೇಕವಾಗಿತ್ತು. ಆಕೆ 1876 ಆಗಸ್ಟ್ 7 ರಂದು ಹಾಲಂಡಿನ ಲೀವಾರ್ಡ್‌ನಲ್ಲಿ ಜನಿಸಿದಳು. ಅವಳ ಹೆಸರು ಮಾರ್ಗರಿಟಾ ಗಟ್ರೂಡಾ ಜಿಲ್. ಅವಳ

ತಾಯಿ ಡಚ್ ಕುಲಕ್ಕೆ ಸೇರಿದ್ದ ಸುಂದರ ಯುವತಿ; ತಂದೆ ಆದಾಮನೂ ರೂಪವಂತ. 1891ರಲ್ಲಿ ಮಾರ್ಗರಿಟಾ ತನ್ನ ತಾಯಿಯನ್ನು ಕಳೆದುಕೊಂಡಾಗ ಅವಳ ವಯಸ್ಸಿನ್ನೂ 14. ಆದರೆ ಶರೀರದ ವಿಶೇಷ ಬೆಳವಣಿಗೆಯಿಂದಾಗಿ ಪ್ರೌಢ ಯುವತಿಯಂತೆ ತೋರುತ್ತಿದ್ದಳು. ಪುರುಷರನ್ನು, ಅದರಲ್ಲೂ ವಯಸ್ಸಾದವರನ್ನು ಮರುಳುಗೊಳಿಸುವ ಕಲೆ ಅವಳಿಗೆ ಕರಗತವಾಗಿತ್ತು. ಅಮ್‌ಸ್ಟರ್ ಡಾಮಿನಲ್ಲಿ ಅವಳು ಶಾಲೆಗೆ ಹೋಗುತ್ತಿದ್ದಳು. ಆಗ ಅವಳನ್ನು ಶಾಲೆಯ ವೃದ್ಧ ಅಧಿಕಾರಿಯೊಬ್ಬ ಮೋಹಿಸಿದ ಪ್ರಕರಣ ಅವಳು ಶಾಲೆಯನ್ನು ಬಿಡುವವರೆಗೆ ಮುಂದುವರೆಯಿತು.

ಅಲ್ಲಿಂದ ಮಾರ್ಗರಿಟಾ ಹೇಗ್ ನಗರಕ್ಕೆ ಹೋದಳು. ಇಂಡೋನೇಷ್ಯಾದ ಡಚ್ ವಸಾಹತಿನಲ್ಲಿ ಸೇನಾಧಿಕಾರಿಯಾಗಿದ್ದ ಕ್ಯಾಪ್ಟನ್ ರುಡಾಲ್ಫ್ ಮ್ಯಾಕ್ ಲಿಯಟ್ ಅವಳ ಸ್ನೇಹ ಬೆಳೆಸಿದ. ಅವನು ಸಾಹಸಿ, ರೂಪವಂತ, ವಯಸ್ಸು ನಲವತ್ತಾಗಿದ್ದರೂ ವಿವಾಹವಾಗಿರಲಿಲ್ಲ. 1895 ರಲ್ಲಿ ಅವನು ರಜೆಯ ಮೇಲೆ ಹೇಗ್‌ಗೆ ಬಂದಿದ್ದಾಗ ಈ 18 ವರ್ಷದ, 21ರ ಮೈಕಟ್ಟಿನ ತರುಣಿಯನ್ನು ಕಂಡ. ಅವಳ ಆಕರ್ಷಕ ಕಣ್ಣು, ಮಾದಕ ತುಟಿ, ಎತ್ತರದ ನಿಲುವು ಅವನನ್ನು ಮೋಹಿಸಿತು. ಯಾವಾಗಲೂ ಸೇನಾಧಿಕಾರಿಗಳೆಂದರೆ ಮರುಳಾಗುತ್ತಿದ್ದ ಮಾರ್ಗರಿಟಾ ತನ್ನ ದೇಹವನ್ನು ಅವನಿಗೊಪ್ಪಿಸಿದಳು. ಅವರೊಳಗಿನ ಸಂಬಂಧ ಮುಂದುವರೆದು, ಆಕೆ ಗರ್ಭವತಿಯಾದುದರಿಂದ 1895 ರಲ್ಲಿ ಅವರ ಮದುವೆಯಾಯಿತು.

ಆದರೆ ದುರಭಿಮಾನಿಯೂ ಜಗಳಗಂಟಿಯೂ ಸ್ವಾರ್ಥಿಯೂ ದುಂದುಕೋರಳೂ ಆದ ಮಾರ್ಗರಿಟಾಳ ದಾಂಪತ್ಯಸಾಮರಸ್ಯ ಬಹುಕಾಲ ಉಳಿಯಲಿಲ್ಲ. ಗಂಡನ ಕೈಯಲ್ಲಿದ್ದ ಹಣವನ್ನು ಬೇಗನೆ ಕರಗಿಸಿ ಅವನೊಂದಿಗೆ ನಿತ್ಯ ಜಗಳ ಕಾಯಲಾರಂಭಿಸಿದಳು. ಮರುವರ್ಷ ಅವಳಿಗೆ ಒಂದು ಗಂಡು ಮಗು ಹುಟ್ಟಿತಾದರೂ ಅದರ ಮೇಲೆ ದ್ವೇಷ ತಾಳಿ ಅದಕ್ಕೆ ಮೊಲೆಯೂಡಿಸಲು ಒಪ್ಪುತ್ತಿರಲಿಲ್ಲ. 1897 ರಲ್ಲಿ ಅವರ ಸಂಸಾರ ಜಾವಾಕ್ಕೆ ತೆರಳಿತು. ಅಲ್ಲಿನ ವೈಭವೋಪೇತ ಪರಿಸರದಲ್ಲಿ ಅವಳು ಜನರನ್ನು ಆಕರ್ಷಿಸಿದಳು. ತರುಣ ಸೇನಾಧಿಕಾರಿಗಳೊಂದಿಗೆ ಆಕೆಯ ಚೆಲ್ಲಾಟ ಮಿತಿಮೀರಿದಾಗ ಅವಳ ಗಂಡನು ನೋವು ತಾಳಲಾರದೆ ಶಾಂತಿಯನ್ನು ಕಳೆದುಕೊಂಡ.

1898 ರಲ್ಲಿ ಮಾರ್ಗರಿಟಾಗೆ ಒಂದು ಹೆಣ್ಣು ಶಿಶು ಜನಿಸಿತು. ಆ ವರ್ಷ ಅವಳ ಗಂಡನಿಗೆ ಸುಮಾತ್ರಾಕ್ಕೆ ವರ್ಗವಾಯಿತು. ಅಲ್ಲಿ ಅವಳ ಗಂಡು ಮಗುವನ್ನು ಕೆಲಸದವಳು ವಿಷವಿಕ್ಕಿ ಕೊಂದದ್ದು, ಅದರಿಂದ ಮಾರ್ಗರಿಟಾಗೆ ಕೊಂಚ ದುಃಖವಾಯಿತಾದರೂ ತನ್ನ ದುರ್ವರ್ತನೆಯನ್ನು ಆಕೆ ತಿದ್ದಿಕೊಳ್ಳಲಿಲ್ಲ. 1900ರಲ್ಲಿ ಒಂದು ದಿನ ಅವಳ ಗಂಡ ಅವಳು ಯುವಕ ಸೇನಾಧಿಕಾರಿಯೊಬ್ಬನ ಶಯ್ಯಾಭಾಗಿನಿಯಾಗಿರುವುದನ್ನು ಕಾಣಬೇಕಾಯಿತು. ಈಗಾಗಲೇ ಹಣ್ಣು ಹಣ್ಣಾಗಿದ್ದ ಆತ 1902 ರಲ್ಲಿ ಮಗುವನ್ನು ತನ್ನಲ್ಲೇ ಉಳಿಸಿಕೊಂಡು ವಿವಾಹ ವಿಚ್ಛೇದನೆ ಮಾಡಿಕೊಂಡ.

27 ರ ಏರುಹರೆಯದ ಜವ್ವನೆ ಮಾರ್ಗರಿಟಾ ಭವಿಷ್ಯವನ್ನು ಹಾರೈಸುತ್ತಾ 1903 ರಲ್ಲಿ ಪ್ಯಾರಿಸಿಗೆ ಬಂದಳು. ಆದರೆ ಅಲ್ಲಿ ಅವಳ ಆರಂಭದ ಜೀವನ ದುಃಖಕರವಾಗಿತ್ತು. ಜೀವನಕ್ಕೆ ಗತಿಯಿಲ್ಲದೆ ಅವಳು ಕಲಾವಿದರ ಮಾಡೆಲ್ ಆಗಲು ಯತ್ನಿಸಿದಳು, ಅಂಗಸೌಷ್ಠವ ಚೆನ್ನಾಗಿದ್ದರೂ ಸುಂದರಿಯಾಗಿರದ ಅವಳಿಗೆ ಅದರಿಂದ ಫಲ ಸಿಗಲಿಲ್ಲ. ಹಾಗಾಗಿ ಅವಳು ವೇಶ್ಯಾವಾಟಿಕೆಗೆ ಸೇರಿ ಸೂಳೆಯಾಗಿ ಬದುಕಬೇಕಾಯಿತು. ಅನಂತರ ಮಾರ್ಗರಿಟಾ ಜಾವಾದಲ್ಲಿ ನೋಡಿ ಕಲಿತಿದ್ದ ಕೆಲವು ನೃತ್ಯಗಳನ್ನು ಪ್ಯಾರಿಸಿನಲ್ಲಿ ಪ್ರದರ್ಶಿಸಲು ಯತ್ನಿಸಿದಳು. ಈ ನೃತ್ಯ ಜನರನ್ನು ಆಕರ್ಷಿಸಲಿಲ್ಲ. ಅನ್ಯಗತಿಯಿಲ್ಲದೆ ಆಕೆ ಹಾಲಂಡಿಗೆ ಹೋದರೂ ಮತ್ತೆ ಪ್ಯಾರಿಸ್ಸಿಗೆ ವಾಪಸಾದಳು. ಜನರನ್ನು ಆಕರ್ಷಿಸಲು ಅವಳು ಏನು ಮಾಡಲೂ ಸಿದ್ಧಳಿದ್ದಳು.

ಪ್ಯಾರಿಸ್ಸಿನ ಒಂದು ನೃತ್ಯ ಕೂಟದಲ್ಲಿ ಮಾರ್ಗರಿಟಾ ಸಂಪೂರ್ಣ ನಗ್ನಳಾಗಿ ಪೌರಸ್ತ್ಯ ನೃತ್ಯವೊಂದನ್ನು ನೀಡಿದಾಗ ಒಬ್ಬ ಪತ್ರಿಕಾ ಸಂಪಾದಕರು ಅವಳ ಉಜ್ವಲ ಜನಪ್ರಿಯತೆಯನ್ನು ಗುರುತಿಸಿ ಕೆಲವು ಪ್ರಚಾರ ತಂತ್ರಗಳನ್ನು ಆಕೆಗೆ ಹೇಳಿಕೊಟ್ಟರು.

ಅಂದಿನಿಂದ ಅವಳು 'ಮಾತಾಹರಿ'ಯ ಕಟ್ಟು ಕಥೆ ಕಟ್ಟಿದಳು. ಇವಳ ನಗ್ನ ನೃತ್ಯ ಪ್ಯಾರಿಸಿನ ವಿಲಾಸಿಗಳಿಗೆ ಹುಚ್ಚು ಹಿಡಿಸಿತು. ಅವಳ ನೃತ್ಯ ಕಾರ್ಯಕ್ರಮಕ್ಕಾಗಿ ಧನಿಕರು ಹೇರಳ ಹಣ ವ್ಯಯಿಸಹತ್ತಿದರು. ನಗ್ನತೆಯ ಪರಿವೆಯಿಲ್ಲದೆ ನರ್ತಿಸುತ್ತಿದ್ದ ಅವಳ ದೇಹ ಸೌಷ್ಠವಕ್ಕೆ ಮರುಳಾಗದವರಿರಲಿಲ್ಲ. ಮೂರು ವರ್ಷದಲ್ಲಿ ಮಾತಾಹರಿಯ ಹೆಸರು ಮನೆ ಮಾತಾಯಿತು.

ಅವಳು ಪ್ಯಾರಿಸಿನಿಂದ ಮಾಂಟೆಕಾರ್ಲೋ, ವಿಯೆನ್ನಾ. ಇಟಲಿ, ಸ್ಪೈಲೇಶಿಯಗಳಲ್ಲಿ ಹೆಸರು ಮಾಡಿದಳು. ಕಾಲ ಸರಿದಂತೆ ಅವಳ ನೃತ್ಯದ ಜನಪ್ರಿಯತೆ ಇಳಿಯುತ್ತಾ ಆಕೆಯ ಪ್ರೇಮಭಿಕ್ಷೆ ಪಡೆಯಲು ಹಾತೊರೆಯುವವರ ಸಂಖ್ಯೆಯೇ ಹೆಚ್ಚಾಯಿತು. 1913 ರ ವೇಳೆಗೆ ಯೌವನ ಹಳಸಿಹೋಗಿದ್ದ ಮಾತಾಹರಿಯ ನೃತ್ಯ ಯಾರಿಗೂ ಬೇಡವಾಗಿತ್ತು. ಬದಲಾಗಿ ಫ್ರೆಂಚ್, ಜರ್ಮನ್ ಹಾಗೂ ಇತರ ಸೇನಾಧಿಕಾರಿಗಳು ಅವಳ ಕೈಗೊಂಬೆಗಳಾದರು. ಬ್ರಾನ್ಸ್‌ವಿಕ್ ಡ್ಯೂಕ್, ಜರ್ಮನಿಯ ಯುವರಾಜ, ಜರ್ಮನಿಯ ಪೋಲೀಸ್ ಮುಖಂಡ ವಾನ್‌ಜಾಗೋ ಮೊದಲಾದವರು ಅವಳ ನೆರಳುಗಳಾದರು. ಫ್ರೆಂಚ್ ಸರಕಾರದಲ್ಲೂ ಆಕೆಯ ಹಿಂಬಾಲಕರು ಅನೇಕರಿದ್ದರು.

ಮೊದಲ ಮಹಾಯುದ್ಧದ ಆದಿಯೇ ಮಾತಾಹರಿಯ ವಿನಾಶದ ಬುನಾದಿಯಾಯಿತು. 1914 ಜುಲೈನಲ್ಲಿ ಆಕೆ ಬರ್ಲಿನಿನಲ್ಲಿದ್ದಳು. ಆಗ ವಾನ್‌ಜಾಗೋ ಅವಳೊಂದಿಗೆ ಭೋಜನ ಸ್ವೀಕರಿಸಿ ಅವಳಿಗೆ 30 ಸಾವಿರ ಫ್ರಾಂಕು ಕೊಟ್ಟನೆಂದು ಮುಂದೆ ಫ್ರೆಂಚ್ ಗುಪ್ತಚಾರ ಪಡೆ ಅವಳ ವಿರುದ್ಧ ನ್ಯಾಯಾಲಯದಲ್ಲಿ ಆರೋಪಿಸಿತು. 1915 ರಲ್ಲಿ ಮಾತಾಹರಿ ಮಿತ್ರರಾಷ್ಟ್ರಗಳ ಕಾಕದೃಷ್ಟಿಗೆ ಈಡಾದಳು. ಸ್ಪೇನಿನ ರಾಜಧಾನಿಯಲ್ಲಿ ಅವಳು ಜರ್ಮನ್ ಅಧಿಕಾರಿಗಳೊಂದಿಗೆ ಓಡಾಡುತ್ತಿರುವುದಾಗಿ ಬ್ರಿಟಿಷರಿಗೆ ಸುದ್ದಿ ಬಂದಿತ್ತು. ಇಟಾಲಿಯನ್ ಬಾತ್ಮೀದಾರರು ಫ್ರೆಂಚ್ ಮತ್ತು ಬ್ರಿಟಿಷ್ ಸರಕಾರಗಳಿಗೆ ಕಳಿಸಿದ ವರದಿಯೊಂದರಲ್ಲಿ ಮಾತಾಹರಿ ಎಂಬ ಪ್ರಸಿದ್ಧ ಭಾರತೀಯ ನರ್ತಕಿ ಜಪಾನಿ ಹಡಗಿನಲ್ಲಿ ಹೊರಟು, ಜರ್ಮನ್ ಪಕ್ಷವನ್ನು ಸೇರುವಂತಿದೆಯೆಂದು ತಿಳಿಸಲಾಗಿತ್ತು. ಫ್ರೆಂಚ್ ಗೂಢಚಾರರು ಫ್ರಾನ್ಸಿನಲ್ಲಿ ಅವಳ ಚಲನವಲನಗಳನ್ನು ಗಮನಿಸಿದಾಗ ಅವಳು ತಟಸ್ಥ ರಾಷ್ಟ್ರಗಳ ರಾಯಭಾರಿಗಳ ಮುಖಾಂತರ ಕೆಲವು ಪತ್ರಗಳನ್ನು ಕಳಿಸಿದ್ದಳೆಂಬುದಲ್ಲದೆ ಬೇರೇನೂ ಶೋಧವಾಗಲಿಲ್ಲ. ಆದರೂ ಫ್ರಾನ್ಸ್ ಸರಕಾರ ಅವಳಿಗೆ ದೇಶಬಿಟ್ಟು ಹೋಗಲು ಸೂಚಿಸಿತು. ಆದರೆ ತಾನು ಜರ್ಮನ್ ಗುಪ್ತಚಾರಳಲ್ಲವೆಂದು ಹೇಳಿ ಮಾತಾಹರಿ ಫ್ರಾನ್ಸ್ ಸರಕಾರದ ಗೂಢಚಾರಿ ಕೆಲಸ ವಹಿಸಿಕೊಂಡಳು,

ಆಗ ಬೆಲ್ಜಿಯಮ್ಮನ್ನು ಜರ್ಮನ್ನರು ಆಕ್ರಮಿಸಿದ್ದರು. ಅಲ್ಲಿದ್ದ ಜರ್ಮನ್ ಜನರಲ್ ಮಾರಿತ್ಸ್‌ವಾನ್ ವಿಸಿಂಕೆಯನ್ನು ಮೋಹದ ಬಲೆಯಲ್ಲಿ ಕೆಡವಿ ವಧೆ ಮಾಡಲು ಮಾತಾಹರಿಯನ್ನು ಫ್ರೆಂಚರು ಕಳಿಸಿದರು. ಅವಳ ಕೈಯಲ್ಲಿ ಬೆಲ್ಜಿಯಂನಲ್ಲಿದ್ದ ಫ್ರೆಂಚ್ ಗೂಢಚಾರರ ವಿವರಗಳನ್ನೂ ಕೊಟ್ಟರು. ಕೆಲವೇ ದಿನಗಳಲ್ಲಿ ಅವರಲ್ಲೊಬ್ಬನು ಜರ್ಮನರ ಕೈಗೆ ಸಿಕ್ಕಿ ಸತ್ತಾಗ ಅವಳು ತಮ್ಮ ವಿರುದ್ಧ ಕೆಲಸ ಮಾಡುತ್ತಿದ್ದಾಳೆಂಬ ಶಂಕೆ ಫ್ರೆಂಚರಿಗೆ ಬಾರದಿರಲಿಲ್ಲ. 1916 ರಲ್ಲಿ ಇದೇ ಶಂಕೆಯಲ್ಲಿ ಬ್ರಿಟಿಷರು ಅವಳನ್ನು ಬಂಧಿಸಿ ಮುಖ್ಯಾಧಿಕಾರಿ ಸರ್ ಬೇಜಿಲ್ ಥಾಮ್ಸನನ ಎದುರು ಹಾಜರು ಮಾಡಿದರೂ ಯಾವುದೇ ಪುರಾವೆ ಸಿಗದ ಕಾರಣ ಎಚ್ಚರಿಸಿ, ಅಲ್ಲಿ ಮಾತಾಹರಿ ಜರ್ಮನ್ ನೌಕಾಧಿಕಾರಿ ಕ್ಯಾಪ್ಟನ್ ವಾನ್‌ಕಾಲೆ ಮತ್ತು ಯುದ್ಧ ಖಾತೆಯ ಪ್ರತಿನಿಧಿ ಮೇಜರ್ ವಾನ್ ಕ್ರೋನರನ್ನು ಬಲೆಗೆ ಹಾಕಿಕೊಂಡಳು. ಅಷ್ಟರಲ್ಲಿ ಗುಪ್ತಚಾರ ಶಾಖೆಯಲ್ಲಿ ವಿಪರೀತ ವೆಚ್ಚ ತಗಲುವ ಮದ್ಯ ಮತ್ತು ಸ್ತ್ರೀ ಸಂಪರ್ಕವನ್ನು ತ್ಯಜಿಸಬೇಕೆಂದು ಜರ್ಮನ್ ಸರಕಾರ ಆಜ್ಞೆಯಿತ್ತಿತ್ತು. ಅವಳನ್ನು ಬಿಡಲು ಮನಸಿಲ್ಲದಿದ್ದರೂ ಅಧಿಕಾರಿಗಳು ಸರಕಾರದ ಆಜ್ಞೆ ಮೀರಲಾಗದೆ ಅವಳನ್ನು ಗೂಢಚಾರಿಯಾಗಿ ಪ್ಯಾರಿಸ್ಸಿಗೇ ಕಳುಹಿಸಿದರು ಅಲ್ಲಿ ಹೋದ ಕೂಡಲೇ ಗುಪ್ತ ಪೋಲೀಸರು ಅವಳನ್ನು ಬಂಧಿಸಿದರು. 1917 ಜುಲೈನಲ್ಲಿ ಆಕೆಯನ್ನು ಮಿಲಿಟರಿ ನ್ಯಾಯಾಲಯದಲ್ಲಿ ಗುಪ್ತ ವಿಚಾರಣೆ ಮಾಡಿದರು. ಆಗ ಪ್ರಬಲವಾದ ಪಹರೆ ಯಿಡಲಾಗಿತ್ತು. ಅವಳ ಮೇಲೆ ಹೊರಿಸಲಾದ ಪ್ರಖರ ಆಪಾದನೆಗಳಲ್ಲಿ ವಾನ್ ಜಾಗೋನಿಂದ ಹಣ ಪಡೆದದ್ದಲ್ಲದೆ, ಮಾದ್ರಿದ್‌ನಲ್ಲಿದ್ದಾಗ ಜರ್ಮನ್ ಗೂಢಚಾರ ಶಾಲೆಯಿಂದ 15 ಸಾವಿರ ಮಾರ್ಕ್, ಜರ್ಮನರಿಂದ 10 ಸಾವಿರ ಫ್ರಾಂಕು ಪಡೆದಿದ್ದೂ ಜರ್ಮನ್ ಗೂಢ

ಚಾರ ಶಾಖೆಯಲ್ಲಿ ಅವಳಿಗೆ ಎಚ್ 21 ಎಂಬ ರಹಸ್ಯ ಹೆಸರಿದ್ದುದು ಇವು ಮುಖ್ಯವಾಯಿತ್ತು.

ಮಾತಾಹರಿ ಆ ಹಣವೆಲ್ಲ ತನ್ನ ಜರ್ಮನ್ ಪ್ರೇಮಿಗಳಿಂದ ತನಗೆ ಶಯ್ಯಾಸುಖದ ಫಲವಾಗಿ ದೊರೆತ ಕಾಣಿಕೆ ಎಂದಳು. ಅವಳೆಷ್ಟು ನಿರಾಕರಿಸಿದರೂ ನ್ಯಾಯಾಲಯವು ಸೈನ್ಯಕ್ಕಾದ ದೊಡ್ಡ ಹಾನಿಯನ್ನು ಗಮನಿಸಿಕೊಂಡು, ಅದಕ್ಕಾಗಿ ಅವಳನ್ನು ಗುಂಡಿಕ್ಕಿ ಕೊಲ್ಲುವ ಶಿಕ್ಷೆ ವಿಧಿಸಿತು. ತನ್ನ ಪ್ರಣಯಕ್ಕಾಗಿ ಕಾದಿದ್ದ ಫ್ರೆಂಚ್ ಪ್ರಮುಖರು ತನ್ನನ್ನು ಬಿಡಿಸಬಹುದೆಂದಿದ್ದ ಅವಳ ಎಣಿಕೆ ಸುಳ್ಳಾಯಿತು. ವಿದೇಶ ಶಾಖೆಯ ಒಬ್ಬ ಅಧಿಕಾರಿಯ ಹೊರತು ಉಳಿದವರೆಲ್ಲ ಅವಳ ಪರಿಚಯವೇ ತಮಗಿಲ್ಲ ವೆಂದರು.

ಸೆಂಟ್‌ಲಾಜಾ ಸೆರೆಮನೆಯಲ್ಲಿ ಮಾತಾಹರಿ ಇದ್ದಾಗ ಅವಳನ್ನು ದೇವರ ಪ್ರಾರ್ಥನೆಗೆ ಒಡಂಬಡಿಸಲು ಪಾದ್ರಿಗಳು ಯತ್ನಿಸಿ ವಿಫಲರಾದರು. "ನಾನು ಕ್ರೈಸ್ತಳಲ್ಲ; ಹಿಂದೂ" ಎಂದೇ ಹಟಹಿಡಿದ ಆಕೆ ಕೊನೆಗಾಲದಲ್ಲಿ ಪಡೆದುಕೊಂಡದ್ದು ಒಂದು ಬೌದ್ಧ ಗ್ರಂಥ ಮಾತ್ರ.

ಮರಣದ ಮುನ್ನಾದಿನ ಸೆರೆಮನೆಯಲ್ಲಿ ಆಕೆ ನೃತ್ಯ ಮಾಡಿದಳು. ಉತ್ಸಾಹದಿಂದ ಪುಟಿಯುತ್ತಲೇ ವಧಸ್ತಂಭದೆಡೆಗೆ ಹೋದಳು. ಸಾಯುವೆನೆಂಬ ಭಯ ಆಕೆಗಿರಲಿಲ್ಲ. ಅವಳನ್ನು ವಧ ಸ್ತಂಭದತ್ತ ಕರೆದೊಯ್ಯುವಾಗ ಅವಳ ಆರೈಕೆ ಮಾಡಿಕೊಂಡಿದ್ದ ಮುದುಕಿ ಸಿಸ್ಟರ್ ಲಿಯೊನೈಡ್ ಕಣ್ಣೀರು ಸುರಿಸಿದಳು. ಆಗ ಮಾತಾಹರಿ ಧೀರ ಗಾಂಭೀರ್ಯ ಸ್ವರದಲ್ಲಿ, ಅಳಬೇಡವ್ವ, ಮರಳಿ ಬರಲು ಟಿಕೇಟಿಲ್ಲದ ಮಹಾಸಿಲ್ದಾಣಕ್ಕೆ ಹೋಗುತ್ತಿದ್ದೇನೆ ಎಂದಳು.

ಸಾಯುವಾಗ ಕಣ್ಣು ಕಟ್ಟಿಸಿಕೊಳ್ಳಲು ಮಾತಾಹರಿ ಒಪ್ಪಲಿಲ್ಲ. 12 ಮಂದಿ ಸೈನಿಕರು ಗುಂಡು ಹಾರಿಸಿದಾಗ ನಸುನಗುತ್ತಲೇ ಅವಳ ದೇಹ ಕೆಳಗೆ ಕುಸಿಯಿತು.

(ಮಧುಕರದ ಕೃಪೆಯಿಂದ)

# ದೇವ ನೀನೊಬ್ಬನೇ

— ಹೆಗ್ಗವಾಡಿಗುರುಸಿದ್ದಪ್ಪ

ಹಲವು ರೂಪವನಾಂತು ಹಲವು ನಾಮವನಾಂತು ।
ಹಲವು ತೆರನಾಗಿರ್ಪ-ದೇವ ನೀನೊಬ್ಬನೇ ॥೧॥

ಹುಟ್ಟಿಸುತ ರಕ್ಷಿಸುತ ನಾಶಗೈಯುತ ನಿತ್ಯ ।
ಗುಟ್ಟಿನಿಂದಿರುತಿರ್ಪ-ದೇವ ನೀನೊಬ್ಬನೇ ॥೨॥

ಬಣ್ಣಿಸಲು ಅಸದಳವು ಎನ್ನುವಂತೀ ಜಗವ।
ಜಾಣ್ಮೆಯಿಂ ರಚಿಸಿರ್ಪ-ದೇವ ನೀನೊಬ್ಬನೇ ॥೩॥

ಈ ಜಗದ ಹುಟ್ಟಿಗೆ ಕಾರಣವ ತೋರಿಸದೆ।
ಸೋಜಿಗವನೆಸಗಿರ್ಪ ದೇವ ನೀನೊಬ್ಬನೇ ॥೪॥

ಎಲ್ಲವನು ತನ್ನೊಳಗೆ ತಾನು ಎಲ್ಲದರೊಳಗೆ ।
ಎಲ್ಲೆಲ್ಲು ಅಡಗಿರ್ಪ-ದೇವ ನೀನೊಬ್ಬನೇ ॥೫॥

ಜಾತಿಮತ ಭೇದಗಳ ಭ್ರಾಂತಿಯನು ಕಲ್ಪಿಸುತ ।
ಕ್ರಾಂತಿಯನು ತಂದಿರ್ಪ-ದೇವ ನೀನೊಬ್ಬನೇ ॥೬॥

ಕೆಲವರಿಗೆ ಸುಖವನ್ನು ಹಲವರಿಗೆ ಕಷ್ಟವನು ।
ನಲವಿನಿಂ ಕೊಡುತಿರ್ಪ-ದೇವನೀನೊಬ್ಬನೇ ॥ ೭ ॥

ಅಜಹರೀಶ್ವರಗಣಪ ಭುಜಗ ಭೂಷಣನೆಂದು ।
ಭಜಿಸಿಕೊಳ್ಳುತಲಿರ್ಪ-ದೇವನೀನೊಬ್ಬನೇ ॥ ೮ ॥

ಸ್ವರ್ಗದಾ ಸೌಖ್ಯವನು ನರಕದಾ ಹಿಂಸೆಯನು ।
ಜಗದಿ ನೀಡುತಲಿರ್ಪ-ದೇವ ನಿನೊಬ್ಬನೇ ॥ ೯ ॥

ಕೀಳು ಕುಲುಗಳನ್ನು ಮೇಲು ಕೀಳನೆ ಮಾಡಿ ।
ವೇಳೆ ವೇಳೆಗೆ ತೋರ್ಪ-ದೇವ ನೀನೊಬ್ಬನೇ ॥ ೧೦ ॥

ಧರ್ಮದ ಮುಖವಾಡದಲಿ ಅಧರ್ಮದ ಕೈವಾಡವನು।
ಮರ್ಮದಿಂ ತುಂಬಿರ್ಪ-ದೇವ ನೀನೊಬ್ಬನೇ ॥ ೧೧ ॥

ನಿನ್ನನಾಮವನೆಸೆವ ಮನವ ನೀಯದೆಎನಗೆ ।
ಅನ್ಯಾಯ ವೆಸಗಿರ್ಪ-ದೇವ ನೀನೊಬ್ಬನೇ ॥ ೧೨ ॥

## ಕನ್ನಡಿಗರ ಬೆಳಗಾವಿ

(18 ನೇ ಪುಟದಿಂದ)

ಕಾದಂಬರಿಯಾಗಲಿ ಹಿಂದಿಯಲ್ಲಿ ಬಂದೇ ಇಲ್ಲ. ಸಣ್ಣ ಕಥೆ, ಕಾದಂಬರಿ, ಕವಿತೆಗಳ ಕ್ಷೇತ್ರದಲ್ಲಿ ಕನ್ನಡವೂ ಮರಾಠಿಯೂ ಪಡೆದಿರುವ ಸಿದ್ಧಿ ಹಿಂದೀಗೆ, ಲಭಿಸಿಲ್ಲ "ರಾಷ್ಟ್ರಭಾಷೆ" ಯೆಂಬ ನೆವ ಹೇಳಿ ಹಿಂದೀ ಸಾಹಿತಿಗಳು ತಮ್ಮ ಮೂರನೆಯ ದರ್ಜೆಯ ಕಥೆ-ಕವಿತೆಗಳನ್ನು ಶಾಲಾಕಾಲೇಜುಗಳಲ್ಲಿ ಪತ್ಯವಾಗಿಸಿಕೊಳ್ಳುತ್ತ ಹಣಲೂಟಿ ಮಾಡುತ್ತಿದ್ದಾರೆ. ಆ ಪತ್ಯಗಳನ್ನು ಭಾರತದ ಎಲ್ಲ ವಿದ್ಯಾರ್ಥಿಗಳೂ ಓದಬೇಕಾಗಿದೆ. ಉತ್ತರ ಭಾರತದ ಹಿಂದೀ ಪತ್ಯಗಳಲ್ಲಿ ದಕ್ಷಿಣದ ಭಾಷೆಗಳ ಸಾಹಿತಿಗಳಿಗೆ ಸ್ಥಾನವಿಲ್ಲ. ಕನ್ನಡದ ಅತ್ಯುತ್ತಮ ಕಥೆ ಕಾದಂಬರಿಗಳ ಹಿಂದೀ ಅನುವಾದ ಪ್ರಕಟಿಸಲು ಯಾವ ಹಿಂದೀ ಪ್ರಕಾಶಕನೂ ಮುಂದೆ ಬರುವುದಿಲ್ಲ. ಹಿಂದೀ ಪತ್ರಿಕೆಗಳಿಗೂ ಸಹ ದ್ರಾವಿಡ ಭಾಷೆಗಳ ಕಥೆ ಕಾದಂಬರಿಗಳ ಬಗೆಗೆ ತಾತ್ಸಾರವೇ ಇದೆ.

—

## ಸಿದ್ಧಗಂಗಾ ಕ್ಷೇತ್ರ: ಪರಿಸರ ಮತ್ತು ಇತಿಹಾಸ

[13 ನೇ ಪುಟ ದಿಂದ]

ಮಾಡಿದ ಕ್ರಾಂತಿ. ಇದರಿಂದ ಸಿದ್ಧಗಂಗಾ—ಶಿವಗಂಗಾ ಕ್ಷೇತ್ರಗಳ ಪರಿಸರದ ಮಹತ್ವವು ಅತ್ಯಂತ ಪ್ರಭಾವಯುತವಾಗಿ ಬೆಳೆದು ನೀತಿನಿಯಮಸಂಹಿತೆಯ ಅಗಾಧ ಪರಿಣಾಮ ಜನತೆಯ ಮೇಲಾಗಿ ಒಂದು ನಿಯಮದ ಸಮಾಜ ಬೆಳೆದುಬರುವುದಕ್ಕೆ 'ಅನೇಕ ವಿದ್ವಾಂಸರು ಜನ್ಮತಾಳುವುದಕ್ಕೆ' ಅವರಿಂದ ಶ್ರೇಷ್ಠತಮ ಗ್ರಂಥಗಳು ಅವಿರ್ಭಾವವಾಗುವುದಕ್ಕೆ ಕಾರಣವಾಯಿತೆನ್ನಬೇಕು. ರೇವಣಸಿದ್ಧಾದಿಗಳು ಹೀಗೆ ಈ ಪರಿಸರವನ್ನು ಶಿವಶರಣವಾಸಯೋಗ್ಯ ಭೂಮಿಯನ್ನಾಗಿಸಿದುದೇ ಕಲ್ಯಾಣದ ಕಡೆಯಿಂದ ಶಿವಶರಣರ ತಂಡಗಳು ಬಂದು ನೆಲೆಗೊಳುವುದಕ್ಕೆ ಕಾರಣವಾಗಿರಬಹುದು.

# ಗಮಕ ಮತ್ತು ಶ್ರುತಿ

[ಶ್ರುತಿಯೇ ಈ ಬ್ರಹ್ಮಾಂಡದ ಜೀವದುಸಿರು]

(ಶ್ರುತಿನರ್ತಕಾ....... ..........)

[ಹಿಂದಿನ ಲೇಖನಗಳಲ್ಲಿ ಗಮಕವೆಂದರೆ ಕನ್ನಡ ಕಾವ್ಯ ಗ್ರಂಥಗಳ ವಾಚನದ ರೀತಿ ಎಂದು ಅರ್ಥ ಹೇಳಿ, ಗಮಕದ ಪ್ರಯೋಜನ, ಗಮಕದ ಗುರಿ, ಗಮಕಿಯವರ್ಣೋಚ್ಚಾರಣೆ, ಇವುಗಳ ವಿಚಾರವಾಗಿ ಬರೆಯಲಾಯಿತು. ಈ ಲೇಖನದಲ್ಲಿ ಕಾವ್ಯವಾಚನ ಮತ್ತು ಶ್ರುತಿ ಇವುಗಳ ಪರಸ್ಪರ ಸಂಬಂಧವನ್ನು ಕುರಿತು ವಿಚಾರ ಮಾಡಲಾಗಿದೆ. ಕಾವ್ಯಗಾಯನವನ್ನು ಬೇರೆಯವರು ಗೊತ್ತುಮಾಡಿದ ಶ್ರುತಿಯಲ್ಲಿಯೇ ನಡೆಸಬೇಕೆಂದು ನಿಯಮವೇನಾದರೂ ಇದೆಯೆ? ಶ್ರುತಿ ಎಂದರೆ ಏನು? ಶ್ರುತಿಯ ಅಗತ್ಯವೇನು? ಎಂಥಾ ಶ್ರುತಿಯನ್ನು ಉಪಯೋಗಿಸುವುದು ಉತ್ತಮ? ಎಲ್ಲರಿಗೂ-ಶ್ರುತಿ ಸೇರುವುದು -ಗೋಚರವಾಗುತ್ತದೆಯೆ? ಶ್ರುತಿಗೂ ರಾಗಕ್ಕೂ ಏನಾದರೂ ಸಂಬಂಧವಿದೆಯೆ? ಆಯಾಯ ಗಮಕಿಯ ಕಂಠಕ್ಕೆ ಶ್ರುತಿಯನ್ನು ಹೇಗೆ ನಿರ್ಣಯಿಸುವುದು? ಈ ಲೇಖನದಲ್ಲಿ ಪರಿಶೀಲಿಸಲಾಗಿದೆ.]

ಸುಮಾರು ಅರವತ್ತುವರುಷದ ಹಿಂದೆ ನಡೆದ ವಿಚಾರವಿದು.

ನಾನು ಆಗ ಸಂಗೀತವನ್ನು ಕಲಿಯಲು ಹಾರ್ಮೋನಿಯಂ ವಿಠ್ಠಲರಾಯರ ಬಳಿಗೆ ಹೋದೆ. ಆಗಿನ ಕಾಲದಲ್ಲಿ ಅವರು ಬಹು ಪ್ರಸಿದ್ಧಿಯಾಗಿದ್ದರು. ಯಾರಿಗಾದರೂ ಅವರು .ಸಂಗೀತವನ್ನು ಕಲಿಸಲು ಶಕ್ತರೆಂಬ ಉಕ್ತಿಯಿತ್ತು. ನಾಲ್ಕನೆಯ ಮನೆ (ಶಂಕರಾಭರಣ-ಮೇಳದ ಹಾರ್ಮೋನಿಯಂನಲ್ಲಿ ಬಿಳೀ ನಾಲ್ಕು) ಶ್ರುತಿ ಇಟ್ಟು ನನ್ನ ಕೂಗಿಸಿದರು. ನನ್ನ ಧ್ವನಿ ಮೇಲಕ್ಕೇರಲಿಲ್ಲ ಮೇಲಿನ ಷಡ್ಜನನಗೆ ಎಟುಕಲಿಲ್ಲ. ಮೂರನೆಯ ಮನೆಗೆ ಶ್ರುತಿಯನ್ನು ಇಳಿಸಿದರು - ಅದೂ ಎಟುಕಲಿಲ್ಲ ಎರಡನೆ ಮನೆಯ ಸ್ಥಿತಿಯೂ ಹಾಗೆ ಆಯಿತು; ಒಂದೂವರೆ ಮನೆ ಶ್ರುತಿ ಆಗಬಹುದೆಂದು ತೋರಿತು. ಅವರು ನಿರ್ಣಯ ಹೇಳಿದರು-- "ಇಲ್ಲ! ಪ್ರಯೋಜನವಿಲ್ಲ!! ಭಜನೆ ಮಂದಿರಕ್ಕೆ ಹೋಗಿ ನಾಲ್ಕು ಹಾಡು ಕಲ್ತುಕೊ!" ಆಗಿನ ಕಾಲದಲ್ಲಿ ಅಭಿಪ್ರಾಯ ಹಾಗಿತ್ತು. ಯಾವ ಮಾನವನ ಕಂಠವು ನಾಲ್ಕನೇ ಮನೆ ಶ್ರುತಿಯಲ್ಲಿ ತಾರಕ ಮಧ್ಯಮಕ್ಕೆ ಏರುವುದಿಲ್ಲವೋ ಆ ಮಾನವನು ಸಂಗೀತವನ್ನು ಕಲಿಯಲು 'ನಾಲಾಯಖ್ಖು!'

ನಾಟಕದಲ್ಲಿ ಪಾರ್ಟು ಮಾಡುವ ವಿಚಾರದಲ್ಲೂ ಹೀಗೆ. ವಿರಾಟಪರ್ವ ನಾಟಕದಲ್ಲಿ ದ್ರೌಪದಿ ಪಾರ್ಟು ಮಾಡಲು ಒಪ್ಪಿಕೊಂಡು 'ಸಂಗೀತ'ವನ್ನು ಗೆಲ್ಲಲಾರದೆ ಕೊನೆಗೆ ಭೀಮನ ಪಾರ್ಟು ಮಾಡಿದೆ. ಈಗಿನ ತತ್ವಜ್ಞರ ಮತ ಬೇರೆ, ಮಂದ್ರ ಸ್ಥಾಯಿಗಿಂತಲೂ ಕೆಳಗಿನ ಶ್ರುತಿಯಲ್ಲಿ ಹಾಡಿದರೂ ಯಂತ್ರವು ಅದನ್ನು ನೂರಾರು ಮಂದಿಗೆ ಕೇಳಿಸುವಂತೆ ಮಾಡಿ ಬಿಡುತ್ತದೆ. ಆದ್ದರಿಂದ ಪ್ರತಿ ಕನ್ನಡಿಗನೂ – ಏಕೆ ಪ್ರತಿ ಮಾನವನೂ – ಗಮಕಿಯಾಗಬಹುದು: ಕಾವ್ಯವಾಚನ ಮಾಡಬಹುದು.

ಇನ್ನು ಶ್ರುತಿ ವಿಚಾರ ಪರಿಶೀಲಿಸೋಣ.

(1) ಶ್ರುತಿ ಎಂದರೆ ಆಧಾರಷಡ್ಜ. ಇದಕ್ಕೆ ತೀವ್ರ, ಕುಮುದ್ವತಿ, ಮಂದ, ಛಂದೋವತಿ – ನಾಲ್ಕು ಶ್ರುತಿಗಳು ಶ್ರುತಿ ಜಾತಿಗಳು– ದೀಪ್ತ, ಆಯತ, ಕರುಣ, ಮೃದು, ಮಧ್ಯ. ಎಂಬ ಐದು ಮಾತಂಗನ ಮತದ ಪ್ರಕಾರ ಶ್ರುತಿ ಎಂಬುದುಂಟು.[1]

2) ಅನೇಕ ತತ್ವಜ್ಞರು ಅನೇಕ ಸಂಖ್ಯೆಗಳನ್ನು ನಮೂದಿಸುತ್ತಾರೆ– 1, 2, 3, 4, 5, 9, 10, 22, 24 ಮತ್ತು 66.

1) ಬೃಹದ್ದೇಶಿ ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ–ಡಿಸೆಂಬರ್ 1977 ಪುಟ 97

4) ಕೋಹಲ ಕಲ್ಲಿನಾಥನು ಶ್ರುತಿಗಳು ಅನಂತವೆಂದಿದ್ದಾನೆ.– ಗಮಕದ ವಿಚಾರದಲ್ಲಿ ಈ ಮತವೇ ಸಮಂಜಸವೆಂದು ನನಗೆ ತೋರುತ್ತದೆ.

5) ಶ್ರುತಿ ಎಂದರೇನು ? ಈ ಪ್ರಶ್ನೆಗೆ ಉತ್ತರವನ್ನು ಗ್ರಹಿಸುವುದು ಅವಶ್ಯಕ.

ಅ) ಎರಡು ಶುದ್ಧ ಸ್ವರಗಳ ಮಧ್ಯೆ ನಮಗೆ ಗೋಚರವಾಗುವುದೇ ಶ್ರುತಿ.

ಕ) ಉಚ್ಚಾರಣೆಯನ್ನು ಒಟ್ಟುಗೂಡಿಸಿ ಅದಕ್ಕೆ ತಳಹದಿಯಾಗಿ ನಿಲ್ಲುವುದೇ ಶ್ರುತಿ.– ಹೀಗೆಂದಾಗ ಒಂದು ಉಪಮಾನವನ್ನು ನಾವು ಮನಸ್ಸಿಗೆ ತಂದು ಕೊಳ್ಳಬಹುದು. ಮಣಿಗಳನ್ನು ಪೋಣಿಸುವ ದಾರಕ್ಕೆ ಶ್ರುತಿಯನ್ನು ಹೋಲಿಸ ಬಹುದು. ಈ ಅಭಿಪ್ರಾಯದಲ್ಲೇ ನಾರದೀಯ ಶಿಕ್ಷೆಯಲ್ಲಿ (I. 1. 9.) ಸಾಮಗಾನದಲ್ಲಿ ಶ್ರುತಿಯನ್ನು ತಿಳಿಯದ ಆಚಾರ್ಯನು ಆಚಾರ್ಯನೇ ಅಲ್ಲ-ಎಂದು ಉಕ್ತವಾಗಿರುವುದು.

ಶ್ರುತಿಯು ಅಗತ್ಯವೇ ಎಂಬ ಪ್ರಶ್ನೆಯನ್ನು ಗಮಕಿ ಕೇಳುವುದಿಲ್ಲ. ಸಾಮಾನ್ಯ ಜನರು ಕೇಳುವುದುಂಟು. ಶ್ರುತಿಯಿಲ್ಲದೆ ವಾಚನ ಮಾಡುವುದು ಕಷ್ಟತರ ಅಭ್ಯಾಸ ಮಾಡುವಾಗ ಶ್ರುತಿಯ ಅಗತ್ಯ ಎಲ್ಲರಿಗೂ ಗೋಚರವಾಗುವುದು. ವಾಚನ ಮಾಡಿದರೆ, ಮಾತುಗಳು ಒಂದೊಂದು ಒಂದೊಂದುಕಡೆಗೆ ಹೋದಂತೆ ಭಾಸವಾಗುತ್ತದೆ ಬರುಬರುತ್ತ ಧ್ವನಿಯು ಸಣ್ಣಗಾಗಿ ಮೇಲಕ್ಕೆ ಏರುವುದೂ ಉಂಟು. ಇವಕ್ಕೆ ಬಹುಮಟ್ಟಿಗೆ ಕಾರಣ– ಮಾಧ್ಯಮ ದ್ರವ್ಯ ( Mediem ). ವಾಚನವು ಒಂದು ದಾರಿಯನ್ನು ಹಿಡಿದು ಸಾಗುವುದಕ್ಕೂ ಮಧ್ಯಮ ದ್ರವ್ಯದ ಅಡಚಣೆ ಆದಷ್ಟು ಕಡಿಮೆಯಾಗುವುದಕ್ಕೂ ಶ್ರುತಿಯು ಅತ್ಯಂತ ಸಹಾಯಕರ. ಕಾವ್ಯದ ಶಯ್ಯಾಪಾಕಗಳನ್ನು ಶ್ರೋತೃಗಳಿಗೆ ವ್ಯಕ್ತಮಾಡಿಸುವುದು ಶ್ರುತಿಯ ದೊಡ್ಡ ಗುಣ.

ಗಾಯನ ವಿಚಾರದಲ್ಲಿ ಶ್ರುತಿಯ ಅಗತ್ಯವನ್ನು ನೋಡೋಣ–ಶ್ರುತಿಯಿಲ್ಲದಿದ್ದರೆ ಗಾಂಧಾರ ( ಗ ) ನಿಷಾದ ( ನಿ ) ಗಳ ಸ್ವರೂಪ ಕೇಳುವವರಿಗೆ ಚನ್ನಾಗಿ. ಗೋಚರವಾಗುವುದಿಲ್ಲ. ಪಂಚಮ ( ಪ ) ದ ನಿಲುಗಡೆಯಾಗಲಿ ಅದರ ಮಾರ್ಗ, ಚಿತ್ರಪತೀ ಮೂರ್ಛನೆಗಳ ಸ್ವರೂಪವಾಗಲಿ ನಿಷ್ಕರ್ಷೆಯಾಗಿ ವ್ಯಕ್ತವಾಗುವುದಿಲ್ಲ; ಎಂದರೆ ರಾಗ ಅಚ್ಚುಮಾಸಿದಂತೆ ಕಾಣುತ್ತದೆ. ಭಾವದ ತೀವ್ರತೆ ಕಡಿಮೆಯಾಗಿ ತೋರುತ್ತದೆ.

ಸಂಗೀತ ಶಾಸ್ತ್ರದಲ್ಲಿ ಹೇಳಿರುವ ದಶವಿಧಗಮಕಗಳು ಗಮಕಿಯ ವಾಚನ ರೀತಿಯಲ್ಲಿ ಗಮಕಿಯ ಪ್ರಯತ್ನವಿಲ್ಲದೆ-ಒಂದೊಂದುವೇಳೆ ಗಮಕಿಗೆ ಗೋಚರವಾಗುವಂತೆ—ಪ್ರಾಪ್ತವಾಗುತ್ತವೆ. ಅವುಗಳನ್ನು ಒಟ್ಟುಕೂಡಿಸಿ " ನಯ " ಮಾಡುವುದು ಶ್ರುತಿಯ ಮತ್ತೊಂದು ದೊಡ್ಡಗುಣ.

ಆದುದರಿಂದ ಸಂಗೀತಕ್ಕೆ ಶ್ರುತಿಯು ಅಷ್ಟು ಮುಖ್ಯವೆಂದರೂ ಎನ್ನಬಹುದು. ಶ್ರುತಿರ್ಮಾತಾ ........ ಎಂಬುದು ಗಮಕಕ್ಕೂ ವೇದವಾಕ್ಯ.

ಹಿಂದಿನಕಾಲದಲ್ಲಿ ಕಾಶೀಗೆ ಹೊಗುವವರು ತಮ್ಮ " ವಿಲ್ " ಬರೆದಿಟ್ಟು ಹೊಗುತ್ತಿದ್ದರಂತೆ. ಹಿಂತಿರುಗಿ ಬಂದ ಮೇಲೆ–ತಾವು ಜೀವ ಸಹಿತ ಬಂದದ್ದಕ್ಕೆ —ಕಾಶೀಸಮಾರಾಧನೆ ಮಾಡುತ್ತಿದ್ದಂತೆ. ಈಗ ಬೆಳಿಗ್ಗೆ ಮನೆಯಲ್ಲಿ ಸ್ನಾನ ಮುಗಿಸಿ ಅಡಿಗೆಯವನಿಗೆ ಏನೇನು ಅಡಿಗೆ ಮಾಡಿಡಬೇಕೆಂದು ಹೇಳಿ ಕಾಶೀಗೆ ಹೋಗಿ ವಿಶ್ವನಾಥನ ದರ್ಶನ ಮಾಡಿಕೊಂಡು ಹನ್ನೆರಡು ಗಂಟೆಗೆ ಊಟಕ್ಕೆ ಮನೆಗೆ ಬರಬಹುದು. ಸಂಗೀತ ವಿಚಾರದಲ್ಲೂ ಈಗ ಹೀಗೆ ಈಗ ನಮ್ಮ ನುಡಿ ನಡಿಗೆಗಳೆರಡೂ ಅತಿತ್ವರ.

ಹಳ್ಳಿಗಳಲ್ಲಿ ಶ್ರುತಿಮಾಡುವುದನ್ನು ನೋಡಿದ್ದವರಿಗೆ ಆಗ ಅವರು ಎಷ್ಟು ಪ್ರಯಾಸ ಪಡುತ್ತಿದ್ದರು ಎಂಬುದು ಗೋಚರವಾಗುತ್ತೆ. ಒಂದು ಖಾಲಿ ಸೀಮೆಯೆಣ್ಣೆ ಡಬ್ಬಾ ತೆಗೆದುಕೊಂಡು ಅದರ ಮೇಲೆ ಜೇನುಮೇಣವನ್ನು ಮೆತ್ತಿ, ಅದರ ಮೇಲೆ ಒಂದು ಕಡ್ಡಿಯನ್ನು ( ಮರದ ) ಸಿಕ್ಕಿಸಿ—ಆ ಮರದ ಕಡ್ಡಿಯನ್ನು ತಿಕ್ಕಿ ಶ್ರುತಿ ಹೊರಡಿಸುತ್ತಿದ್ದರು. –ನಾಗ ಸ್ವರದ ಪೆಟ್ಟಿನಲ್ಲಿ ಶ್ರುತಿ ಹಾಕುವುದಕ್ಕೆ ಒಬ್ಬನ್ನು ನಿರಂತರ ಊದುತ್ತಲೇ ಇರುತ್ತಿದ್ದ. ಈಗ ಒಂದು " ಶ್ರುತಿಪೆಟ್ಟಿಗೆ " ಯನ್ನು ಕೊಂಡರೆ, ಶ್ರುತಿ ನಿಮ್ಮ ಕಂಕುಳಲ್ಲಿ ಇರುತ್ತೆ. ಇಂಥಾ ಶ್ರುತಿ ಪೆಟ್ಟಿಗೆಯನ್ನು ಉಪಯೋಗಿಸುವುದು ಈಗ ರೂಢಿಯಲ್ಲಿದೆ.

ಮೇಲ್ತರದ ಗಮಕಿಗಳು—ತಮಗೆ ಎಷ್ಟು

ಕಷ್ಟವಾದರೂ ತಮ್ಮ ತಂಬೂರಿಯನ್ನೇ ತೆಗೆದುಕೊಂಡು ವಾಚನ ಸ್ಥಳಕ್ಕೆ ಹೋಗುತ್ತಾರೆ.

"ತಂಬೂರಿ ಮೀಟಿದವ ಭವಾಬ್ಧಿ ದಾಟಿದವ" ಎಂದರು ದಾಸರು.

ತರವಲ್ಲ ತಂಗಿ ನಿನ್ನ ತಂಬೂರಿ । ಸ್ವರಬರದೆ ಬಾರಿಸದಿರು ತಂಬೂರಿ ॥" ಎಂದರು ಶಿಶುನಾಳ ಶರೀಫರು.

ತಂಬೂರಿಯನ್ನು ಹೊರುವುದು ಕಷ್ಟವೆಂದರೆ ಅದಕ್ಕಿಂತಲೂ ಮೀಟುವುದು ಕಷ್ಟ.

ತಂಬೂರಿ ಮೀಟುವ ಕಲೆಯು ಮಾನವನಿಗೆ ಸ್ವಾಧೀನವಾದರೆ, ಆ ನಾದಾ ಸಂಕೋಲೆಕೆ ದೇವಲೋಕದಲ್ಲಿ ನದೇವತೆಗಳೆಲ್ಲಾ ಕೇಳಲು ಬಂದುಬಿಡುತ್ತಾರೆ. ದೇವಲೊಕ ಹಾಳು ಬಡಿಯುತ್ತೆ. ಅದಕ್ಕೆ ಹೇಳೋದು—ನಾಯಿ ಬೊಗಳಿದರೆ ದೇವಲೊಕ ಹಾಳಾಗುತ್ತೆಯೆ !

ಇದೊಂದು ನಾನು ಕೇಳಿದ ಹಿಂದಿನ ಮಾತು. ಕೆಲವರು, ದಕ್ಷಿಣಾದಿ ಕರ್ನಾಟಕಸಂಗೀತಗಾರರು ಅಭ್ಯಾಸ ಕ್ರಮದಲ್ಲಿ ಎರಡು ತಂಬೂರಿಗಳನ್ನು ಉಪಯೋಗಿಸುತ್ತಿದ್ದರಂತೆ. ಒಂದನ್ನು ಶ್ರುತಿಮಾಡಿದ ಮೇಲೆ ಮತ್ತೊಂದನ್ನು ಆ ಶ್ರುತಿಯ ಮಂದ್ರದ ಪಂಚಮಕ್ಕೆ ಶ್ರುತಿನೋಡಿಕೊಳ್ಳುತ್ತಿದ್ದರಂತೆ. ಆ ಎರಡು ತಂಬೂರಿಗಳ ಶ್ರುತಿಯಲ್ಲಿ ರಾಗದ ಅಭ್ಯಾಸನಡೆಯುತ್ತಿತ್ತಂತೆ. ಇದು ಎಷ್ಟರ ಮಟ್ಟಿಗೆ ಗಮಕಿಗೆ ಸಹಾಯವಾಗಬಹುದು ಎಂಬುದನ್ನು ತಜ್ಞರು ಪ್ರಯೋಗ ನಡೆಸಿ ತಿಳಿದು ಕೊಳ್ಳಬೇಕಾದ ವಿಚಾರ.

ಶ್ರುತಿ ಸೇರಿಸುವುದಕ್ಕೆ ಪ್ರಯತ್ನಪಡಬೇಕೆ ? ಮೊಟ್ಟ ಮೊದಲು ಅನುಭವ ಕಡಿಮೆ ಇದ್ದಾಗ ಕೇಳುವ ಪ್ರಶ್ನೆಯಿದು. ಸೇರಿಸಲು ಪ್ರಯತ್ನಪಡುತ್ತಿದ್ದರೆ ಅದು ಇನ್ನೂದೂರವಾಗುತ್ತದೆ. ಪ್ರತಿನಿಮಿಷವೂ ಸೇರಿಸಲು ಪ್ರಯತ್ನ ಪಡುತ್ತಿದ್ದರೆ ಎರಡು ಗಂಟೆಗಳ ಕಾಲಕಾವ್ಯ ವಾಚನ ಮಾಡುವುದು ಹೇಗೆ ? ಪ್ರಯತ್ನದ ಕಾವ್ಯವೇ ಶ್ರೋತೃಗಳಿಗೆ ಗೋಚರವಾಗುತ್ತಾಗಲಿ ಕಾವ್ಯವಾಚನ ಕೇಳಿ ಬರವುದಿಲ್ಲ.

ಕಾವ್ಯಗಾಯನವು ಸಂಗೀತದಂತೆ ಶಾಸ್ತ್ರವೂ ಹೌದು ಕಲೆಯೂ ಹೌದು. ಪ್ರಾರಂಭದಲ್ಲೇ ಗಾಯನವು ಶ್ರುತಿಯಲ್ಲಿ ಸೇರಿದರೆ ಅದು ನಿಮ್ಮ ಪುಣ್ಯ. ನಾವೇನು ವಾಚನ ಮಾಡಿದರೂ. ಅದು ಶ್ರುತಿಯಲ್ಲಿರುತ್ತೆ. ಸೇರದೇ ಇದ್ದರೆ ಅದು ಆ ಘಳಿಗೆಯ ವಿಶೇಷವೆಂದು ತಿಳಿದುಕೊಂಡು ಅದರ ಕಡೇಗೆ ಗಮನ ಕೊಡದೆ ಗಮಕಿಯು ತನ್ನ ಕಾರ್ಯವನ್ನು ಮುಂದುವರಿಸುವುದು ಕ್ಷೇಮಕರ. ತಮ್ಮ ಕಂಠವನ್ನು ಒತ್ತಿ ಅದನ್ನು ಶ್ರುತಿಗೆ ಸೇರಿಸಲು ಪ್ರಯತ್ನ ಪಡುವುದಕ್ಕಿಂತ ಶ್ರುತಿಗೆ "ಶರಣಾಗಿ" ಕಾರ್ಯಸಾಗಿಸುವುದು ಶ್ರೇಯಸ್ಕರ.

ಎಲ್ಲರಿಗೂ ಶ್ರುತಿಗೋಚರವಾಗುತ್ತದೆಯೆ ? ಹಾಡುವಾಗಾಗಲಿ ಗಮಕವಾಚನ ಮಾಡುವಾಗಾಗಲಿ, ಶ್ರುತಿಸೇರಿದ್ದು ಬಿಟ್ಟದ್ದು ಎಲ್ಲೂರಿಗೂ ಗೋಚರವಾಗುತ್ತದೆಯೇ ? ಒಂದು ಸಾವಿರಜನ ಕೇಳುವವರಲ್ಲಿ ನಾಲ್ಕು ಅಥವ ಐದು ಮಂದಿ ಶ್ರುತಿ ಸೇರಿತು, ಅಥವಾ ಇಲ್ಲ, ಎಂದು ತಿಳಿದುಕೊಳ್ಳಬಲ್ಲರು ಎಂಬುದು ನನ್ನ ವ್ಯಯಕ್ತಿಕ ಅಭಿಪ್ರಾಯ. ಗಂಧರ್‍ವಾಂಶವಿದ್ದರೆ ಮಾತ್ರ ಶ್ರುತಿಗೋಚರವಾಗುವುದು; ಅವರ ಆನಂದದ ಅನುಭವ ಬರುವುದು. ಶ್ರುತಿ ಗೋಚರವಾಗದ ಮಾನವ ತಂಬೂರಿಯ ಶ್ರುತಿಯನ್ನು ಸರಿಯಾಗಿ ಮಾಡಲಾರ; ಸರಿಯಾಗಿ ಮಾಡುವುದು ಕಷ್ಟಕರವೆಂದು. ಎಲ್ಲಾ ವಿದ್ವಾಂಸರಿಗೂ ತಿಳಿದ ವಿಚಾರ. ಪಂಡಿತನಾಗಿರಬಹುದು ಸಾಮಗಾನದಲ್ಲಿ ಪ್ರವೀಣನಾಗಿರಬಹುದು. ಆದಾಗ್ಯೂ ಅವನಿಗೆ "ಶ್ರುತಿಜ್ಞಾನ" ವಿಲ್ಲದೆ ಇರಬಹುದು ಎಂಬುದಕ್ಕೆ ಈ ಕಥೆಯನ್ನು ಹೇಳುತ್ತಾರೆ–

ಗಗೋಧರನೆಂಬ ಋಷಿಯು ಸಾಮವೇದ ಗಾನದಲ್ಲಿ ಮಹಾಪ್ರವೀಣ. ಅವನು ಸಾಮಗಾನ ಮಾಡುವ ಕಾಲದಲ್ಲಿ- ಅವನ ಪತ್ನಿ-ಸುಜಾತೆ-ಯ ಗರ್ಭದಲ್ಲಿದ್ದ ಮಗು ಆ ಸಾಮವೇದ ಗಾನವನ್ನು ಕೇಳಿ ಪರಿಹಾಸ್ಯದಿಂದ ನಕ್ಕಿತು. ಅಷ್ಟೇ ಅಲ್ಲ– "ನೀನು ಉಚ್ಚರಿಸುವವುಗಳು ಶ್ರುತಿಯಲ್ಲೇ ಇಲ್ಲವಲ್ಲ!" ಎಂದಿತಂತೆ. ತಂದೆಗೆ ಕೋಪ ಬಂತು ಅವನು ಶಾಪ ಕೊಟ್ಟ. ಆ ಮಗು ವಕ್ರವಾಗಿ ಹುಟ್ಟಿತು. ಅತನೇ ಅಷ್ಟಾವಕ್ರ. ಗಗೋಧರನಿಗೆ ಕಹೋಳ ಎಂಬ ಹೆಸರೂ ಇದ್ದಂತೆ ತೋರುತ್ತದೆ.

ಸ್ವರ ಅಪಸ್ವರಗಳ ಅಸ್ತಿತ್ವ ಶ್ರುತಿ ಬೋಧನೆಯ ಮೇಲೆ ನಿಂತಿದೆ ಎಂದಾಗ ಶ್ರುತಿ ಜ್ಞಾನವು ಎಷ್ಟು ಅಗತ್ಯವೆಂಬುದನ್ನು ನಾವು ತಿಳಿಯಬಹುದು.

ಭಾವಪೂರಿತವಾಗಿ ವಾಚನ ಮಾಡುವಾಗ ರಾಗ ಹುಟ್ಟಲೇ ಬೇಕು; ಏಕೆಂದರೆ ಭಾವದ ಶಬ್ದ ಪ್ರತೀಕವೇ ರಾಗ. The language of poetry is t h e language of excitement; excitement generatesit and it goverms excitement (The practice of poetry– Robin Skelton) ರಾಗದ ಎಲ್ಲಾ ಮೂರ್ಛನೆಗಳನ್ನು ಕಾವ್ಯಗಾಯಕನು ಒಂದು ಪದ್ಯ ವಾಚನದಲ್ಲಿ ಪ್ರದರ್ಶಿಸುವುದಕ್ಕೆ ಸಾಧ್ಯವಿಲ್ಲ; ಶ್ರೋತೃಗಳು ಹಿಂದೆ ಕೇಳದೇಯಿದ್ದ ಒಂದು ಮೂರ್ಛನೆ ಬಂದಾಗ "ರಾಗ ತಪ್ಪಿದಂತೆ" ಭಾಸವಾಗಬಹುದು. ಅದನ್ನು ತಕ್ಷಣವೇ ತೀವ್ರವಾಗಿ ಟೀಕಿಸದೆ ವಿಚಾರವನ್ನು ಪರಿಶೀಲಿಸಲು ತಜ್ಞರು ಪ್ರಯತ್ನಪಡಬೇಕು.

ಕಾವ್ಯವಾಚನದ ರೀತಿ, ಸುಗಮ ಸಂಗೀತದ ರೀತಿ[3]. ಹಿಂದೋಳ ಮತ್ತು ನವರೋಜಿರಾಗಗಳ ಸಮ್ಮೇಳನದಿಂದ ಎಮನ್ ರಾಗವನ್ನು ಆಚಾರ್ಯ ಪುರುಷನಾದ ಅಮೀರ ಖುಸ್ರು, ಆರು ಶತಮಾನಗಳ ಹಿಂದೆ ನಿರ್ಮಿಸಿದ ಹಾಗೆ ಕಾವ್ಯಗಾಯನ ಮಾಡುವ ಗಮಕಿಯು ಈ ಶತಮಾನದಲ್ಲಿ ತನ್ನದೇ ಒಂದಾದ ರೀತಿಯಲ್ಲಿ ಒಂದು ಹೊಸ ರಾಗವನ್ನು ನಿರ್ಮಾಣ ಮಾಡಬಹುದು. ಸಂಗೀತ ಶಾಸ್ತ್ರಜ್ಞರೂ ನುರಿತ ಗಮಕಿ ವಿದ್ವಾಂಸರೂ ಈ ದೃಷ್ಟಿಯಿಂದ ಕಾವ್ಯಗಾಯನವನ್ನು ಸಹೃದಯದಿಂದ ಪರಿಶೀಲಿಸತಕ್ಕದೆಂದು ನನ್ನ ವಿಧೇಯ ಪೂರ್ವಕವಾದ ಸಲಹೆ.

ಶ್ರುತಿಯನ್ನು ಕಂಡು ಹಿಡಿಯುವ ಬಗೆ ಹೇಗೆ- ಎಂಬ ವಿಚಾರವನ್ನು ನಾವು ಪರಿಶೀಲಿಸೋಣ. ಒಬ್ಬೊಬ್ಬರಿಗೆ ಅವರ ಕಂಠದ ರೀತಿಯನ್ನನುಸರಿಸಿ, ಒದೊಂದು ಶ್ರುತಿಎಂದರೆ ತಪ್ಪಾಗಲಾರದು. ಆ ಶ್ರುತಿಯನ್ನು ಕಂಡು ಹಿಡಿಯಲು ಪ್ರಯೋಗವು ( Experiment ) ಅಗತ್ಯ.

ಕಾವ್ಯಗಾಯನ ರೀತಿಯನ್ನು ಈ ದೃಷ್ಟಿಯಿಂದ ಪರಿಶೀಲಿಸಿದರೆ, ವಾಚನವು ಬಹುಮಟ್ಟಿಗೆ ಮಧ್ಯಮದ ಪಂಚಮ ( ಪ ) ದಿಂದ ತಾರಕದ ಗಾಂಧಾರ ( ಗ ) ವರೆಗಿನ ಸ್ವರಗಳೇ ಕಾವ್ಯರಂಗದಲ್ಲಿ ಕಾಣಬರುವ ಶುದ್ಧ ಸ್ವರಗಳ ಯಾವ ಶ್ರುತಿಯಲ್ಲಿ ಈ ಸ್ವರಗಳು ನಿರ್ದಿಷ್ಟವಾಗಿ ಆಯಾಸವಿಲ್ಲದೆ ಗಮಕಿಯ ಕಂಠದಲ್ಲಿ ನುಡಿಯುತ್ತವೋ ಆ ಶ್ರುತಿಯನ್ನೇ ಅವನು ಉಪಯೋಗಿಸ ಬೇಕು. ಶ್ರುತಿಯನ್ನು ಅಲ್ಲಗಳೆದು ನುಡಿದರೆ ವಾಚನವು " ಕಿರಿಚಿ" ದಂತೆ ಭಾಸವಾಗುತ್ತದೆ. ಸತತಾಭ್ಯಾಸ, ಯೋಗ್ಯ ಗುರು ನಿರ್ದೇಶನ ಮಾತ್ರದಿಂದ ಕಾವ್ಯಗಾಯನದ ಶ್ರುತಿಯು ಗಮಕಿಗೆ ವ್ಯಕ್ತವಾಗುತ್ತದೆ.

---

3 ibid- ಪುಟಗಳ 2, 11

---

(8 ನೇ ಪುಟದಿಂದ....)

ಇದೇನು "ನೀರಿಳಿಯದ ಗಂಟಲೋಳ್ ಕಡುಬು ತುರುಕಿದಂತಾಯ್ತು" ಎಂದು ಮುದ್ದಣ ಮನೋರಮೆಯರ ಸರಸ ಸಂವಾದದ ವಿಷಯ ತೆಗೆಯುವಿ ಏನು ?

ಸುಶಿ, ಪಾಶ್ಚಿಮಾತ್ಯದಲ್ಲಿ ಇಲ್ಲದ ರೂಢಿ ನಮ್ಮಲ್ಲಿ ಏಕೆ ಅನ್ನುವೆ ಏನು ? ನೋಡು, ಅವರೇನು ಮೇಲಿಂದ ಇಳಿದು ಬಂದಿಲ್ಲ. ಅವರ ವಿವಾಹ ಪರಂಪರೆಯ ಸೋಗು, ಬೆಡಗು, ಬಿನ್ನಾಣ ಹಚ್ಚ ಬೇಡ. ಅಂತಹ ಲಗ್ನದ ಮಬ್ಬಿಗೆ ನೀನು ಬಿದ್ದರೆ, ಜ್ಯೂಲಿಯೆಟ್ ಏನೂ, ಆಗುವಿ ನಿನ್ನಗಂಡ ರೋಮಿಯೊ ಆದಾನು. ಆದರೆ ನೀನು ಮನೋರಮೆಯಾಗು. ನಿನ್ನ ಗಂಡ ಮುದ್ದಣನಿರಲಿ.

ಅಮೇರಿಕೆ, ಇಂಗ್ಲಂಡಿನ ಲಗ್ನದ ಪಾಡು ನಿನಗೆ ಗೊತ್ತಿಲ್ಲವೆ ? ಅವರಲ್ಲಿ ವರದಕ್ಷಿಣೆಯ ಪರಿಪಾಠ ಇಲ್ಲ ನಿಜ. ಆದರೆ ಅವರದು ಹೊಣೆಗೆಟ್ಟ ಪ್ರೇಮ ವಿವಾಹ. Keats, Shelley, Byron, Roussean ಇವರ ಮಾತು ನೋಡು. ಛೆ! ನಾನು ಇವರ ಪ್ರತಿಭೆಗೆ ತಲೆದೂಗುವೆ. ಆದರೆ ಇವರ "Loves Philosophy" ನನಗೆ ತ್ಯಾಜ್ಯ. ಇವರದು ಉಚ್ಛೃಂಖಲ ಪ್ರೇಮ ಇಂದು ಚರ್ಚಿನಲ್ಲಿ ವಿವಾಹ ನಾಳೆ ಮುರುಮುಗಡೆ ! ಮಕ್ಕಳಾಟ !

ತಂಗಿ, ಮದರಾಂಗಿ ನಿನ್ನ ಸಣ್ಣ ಬಾಯಿಗೆ ಈ ಚರ್ಚೆ ದೊಡ್ಡ ತುತ್ತಾಯಿತೇನು ? Students of today are citizens of tomorrow, ಅಲ್ಲವೆ ? ಲಗ್ನದ ನಿಗೂಢ ತಿಳಿದಿರಲಿ. ಪ್ರಮಾದವಿಲ್ಲ. ಬರೀ ಗ್ರಂಥ ಓದಿದರೇನು ? ವ್ಯವಹಾರ ಬಿಡಬೇಕೆ ? ನಿನ್ನ ನೆಚ್ಚಿನ ನಾನಿ.

---

# 'ಸಿದ್ಧಗಂಗಾ' ಪತ್ರಿಕೆಯ ಒಡೆತನ ಮತ್ತಿತರ ವಿವರಗಳ ಪ್ರಕಟಣೆ

ಸ್ವರೂಪ ೪ [ವಿಧಿ ೮]

| | | |
|---|---|---|
| 1. ಪ್ರಕಟಣೆಯ ಸ್ಥಳ | — | ಶ್ರೀ ಸಿದ್ಧಗಂಗಾ ಮಠ |
| 2. ಪ್ರಕಟಣೆಯ ನಿಯತಕಾಲಿಕತೆ | — | ಮಾಸಪತ್ರಿಕೆ |
| 3] ಮುದ್ರಕರ ಹೆಸರು | — | ಶ್ರೀ ಶಿವಕುಮಾರ ಸ್ವಾಮಿಗಳು |
| ಭಾರತದ ಪ್ರಜೆಯೇ ? | — | ಹೌದು |
| ವಿಳಾಸ | — | ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ |
| 4]. ಪ್ರಕಾಶಕರ ಹೆಸರು | — | ಹೆಚ್. ಬಿ. ಗಂಗಾಧರಯ್ಯ |
| ಭಾರತದ ಪ್ರಜೆಯೇ ? | — | ಹೌದು |
| ವಿಳಾಸ | — | ಶ್ರೀ ಸಿದ್ಧಗಂಗಾ ಮಠ ತುಮಕೂರು ಜಿಲ್ಲೆ |
| 5] ಸಂಪಾದಕರ ಹೆಸರು | — | ಚನ್ನಪ್ಪ ಎರೆಸೀಮೆ |
| ಭಾರತದ ಪ್ರಜೆಯೇ ? | — | ಹೌದು |
| ವಿಳಾಸ | — | ಶ್ರೀ ಸಿದ್ಧಗಂಗಾ ಮಠ ತುಮಕೂರು ಜಿಲ್ಲೆ |
| 6] ಪತ್ರಿಕೆಯ ಒಡೆತನ ವಹಿಸಿರುವ ವ್ಯಕ್ತಿಗಳು ಮತ್ತು ಪಾಲುದಾರರ ಅಥವಾ ಒಟ್ಟು ಬಂಡವಾಳದ ಶೇಕಡ ೧ ಕ್ಕಿಂತ ಹೆಚ್ಚು ಭಾಗಕ್ಕೆ ಪಾಲುದಾರರಾದವರ ಹೆಸರು ಮತ್ತು ವಿಳಾಸ | — | ಶ್ರೀ ಶಿವಕುಮಾರ ಸ್ವಾಮಿಗಳು ಸಿದ್ಧಗಂಗಾ ಮಠ ತುಮಕೂರು ಜಿಲ್ಲೆ |

ಮೇಲೆ ಕೊಟ್ಟಿರುವ ವಿವರಗಳು ನನಗೆ ತಿಳಿದ ಮಟ್ಟಿಗೆ ಮತ್ತು ನನ್ನ ನಂಬಿಕೆಯಂತೆ ನಿಜವೆಂದು ನಾನು, ಹೆಚ್. ಬಿ. ಗಂಗಾಧರಯ್ಯ, ಘೋಷಿಸುತ್ತೇನೆ.

[ಸಹಿ] **ಹೆಚ್. ಬಿ. ಗಂಗಾಧರಯ್ಯ**
ಪ್ರಕಾಶಕ
"**ಸಿದ್ಧಗಂಗಾ**" ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ

ದಿನಾಂಕ : 1–3–80

# 'ಸಿದ್ಧಗಂಗಾ' ಚಿರಾಯುವಾಗಲೆಂದು

## ಹರಸಿ ಹಾರೈಸುವ ಆಜೀವ ಸದಸ್ಯರ ಬಳಗಕ್ಕೆ ಕೃತಜ್ಞತೆಗಳು

717 ಶ್ರೀ ಹೆಚ್. ವಿ. ಮುದ್ದವೀರಯ್ಯ
ಅಸಿಸ್ಟೆಂಟ್ ಇಂಜಿನಿಯರ್
ಅರಸೀಕೆರೆ ಹಾಸನ ಜಿಲ್ಲೆ.

718 ಶ್ರೀ ಗಂಗಾಧರಯ್ಯ
S/o ಶ್ರೀ ಕೋಟಿಲಿಂಗೇಗೌಡ.
ಗೌಡನ ಕಟ್ಟೆ
ತಿಪಟೂರು ತಾ ತುಮಕೂರು ಜಿಲ್ಲೆ.

719 ಶ್ರೀ ತಮ್ಮಣ್ಣ ಜಾಗನಕೋಟಿ
ಎಲಿಪರಟ್ಟಿ
ರಾಯಬಾಗ್ ತಾ ಬೆಳಗಾಂ ಜಿಲ್ಲೆ

720 ಶ್ರೀ ಎಸ್. ಬಿ. ಕಾಕಟ್ಟೆ, ಬಿ,ಇ, ಎಂ, ಐ,ಇ,
ಬೆಳಗಾಂ

721 ಶ್ರೀ ಎಸ್. ಎ ದೊಡ್ಡವಾಡ.
ನಾಲವಡ್ಡಿ. ಧಾರವಾಡ.

722 ಶ್ರೀ ಎಂ. ನಂಜುಂಡಪ್ಪ
ವಿಜಯನಗರ, ಬೆಂಗಳೂರು-40

723 ಶ್ರೀ ಬಿ. ಆರ್. ಉಮೇಶ್,
ಸಬ್ ಇನ್ ಸ್ಪೆಕ್ಟರ್ ಆಫ್ ಪೊಲೀಸ್
ಶ್ರೀನಿವಾಸಪುರ, ಕೋಲಾರಜಿಲ್ಲೆ,

724 ಶ್ರೀ ಬಿ. ಸಿ. ರುದ್ರಪ್ಪ
ಸೂಪರ್‌ಡೆಂಟ್, ಆಶ್ರಮ ಸ್ಕೂಲ್,
ಮಾಯಸಂದ್ರ ತುರುವೇಕೆರೆ ತಾ
ತುಮಕೂರು ಜಿಲ್ಲೆ

725 ಶ್ರೀ ಸಿದ್ದಬಸವಯ್ಯ ಫೇರ್‌ಮನ್,
S/o ಶ್ರೀ ಬಸವೇಗೌಡ,
ಎಂ. ಜೇವಿನಹಳ್ಳಿ, ತುರುವೇಕೆರೆ ತಾ
ತುಮಕೂರು ಜಿಲ್ಲೆ

726 ಶ್ರೀ ಎಸ್. ಸಿ. ಶಿವಣ್ಣ & ಸನ್ಸ್, ಮರ್ಚೆಂಟ್ಸ್
ದೊಡ್ಡಬಳ್ಳಾಪುರ, ಬೆಂಗಳೂರು ಜಿಲ್ಲೆ

727 ಶ್ರೀ ಡಿ. ಬಿ. ಪಾಟೀಲ್,
ಅಸಿಸ್ಟೆಂಟ್ ಇಂನ್‌ಜಿನಿಯರ್, ಕುಡುಚಿ
ರಾಯಬಾಗ್ ತಾ ಬೆಳಗಾಂ ಜಿಲ್ಲೆ

728 ಶ್ರೀ ರಾಜಕೃಷ್ಣಯ್ಯಸೆಟ್ಟಿ, ಅಸಿಸ್ಟೆಂಟ್
ಇಂನ್‌ಜಿನಿಯರ್ ಕುಡುಚಿ,
ರಾಯಬಾಗ್ ತಾ ಬೆಳಗಾಂ ಜಿಲ್ಲೆ

729 ಶ್ರೀ ಜಿ. ಎಂ. ಚಿನ್ನಸ್ವಾಮಿ,
ಮಾಜಿ ಎಂ ಎಲ್. ಎ.
ಜಿಮಾರಹಳ್ಳಿ,
ನಂಜನಗೂಡು ತಾ
ಮೈಸೂರು ಜಿಲ್ಲೆ.

730 ಶ್ರೀ ಟಿ. ಜಿ. ಮೃತ್ಯುಂಜಯ. ಮರ್ಚೆಂಟ್ಸ್
ಯಾದಗಿರಿ,
ಗುಲಬರ್ಗ ಜಿಲ್ಲೆ

731 ಶ್ರೀ ಶಿವಲಿಂಗಪ್ಪ & ಸನ್ಸ್
ಕಲ್ಮಿಮುಹಳ್ಳಿ
ನಂಜನಗೂಡು ತಾ
ಮೈಸೂರು ಜಿಲ್ಲೆ.

(ಮುಂದುವರಿಯುತ್ತದೆ.)

